# ‘ಕಲಿಯುಗದ ಭೀಷ್ಮ


ಲೇಖಕ

ಮಂಗಳೂರು ಗಣಪತಿ ಸೆಕಂಡರಿ ಶಾಲೆಯ ಅಧ್ಯಾಪಕ

ಕೆ. ಬಿ. ರಾಮಕೃಷ್ಣ.







ಮಂಗಳೂರು

ಸದಾನಂದ ಸಹಕಾರ ಮುದ್ರಣಾಲಯದಲ್ಲಿ

ಮುದ್ರಿತವಾಗಿ

ಬಾಲಸಾಹಿತ್ಯಮಂಡಲ, ಲಿಮಿಟೆಡ್, ಕೊಡಿಯಾಲ್‌ಬೈಲ್,

ಇವರಿಂದ ಪ್ರಕಟಿತವಾಯಿತು.

1926




ಬೆಲೆ: 8 ಆಣೆ

# ಅನುಕ್ರಮಣಿಕೆ.


| | | ಪುಟ |
|---|---|---|
| ೧. | ಕ್ರೀಡಾಪಸ .... .... .... .... | ೧ |
| ೨. | ಮದ್ಯಮಹಿಮೆ .... .... .... .... | ೧೪ |
| ೩. | ಪ್ರತಿಜ್ಞೆ .... .... .... .... | ೨೨ |
| ೪. | ಗೌರೀ ಪೂಜೆ .... .... .... .... | ೩೫ |
| ೫. | ಕುಮಾರೋದಯ .... .... .... | ೪೨ |
| ೬. | ಸತ್ವಪರೀಕ್ಷೆ .... .... .... .... | ೪೫ |
| ೭. | ಕುತಂತ್ರ .... .... .... .... | ೫೫ |
| ೮. | ಮೊಸರಿನಲ್ಲಿ ಕಲ್ಲು .... .... .... | ೫೭ |
| ೯. | ಚಂಡನ ಚಿಂತೆ .... .... .... | ೬೯ |
| ೧೦. | ವಿಚಿತ್ರ ಶಾಸನ .... .... .... | ೭೧ |
| ೧೧. | ರಾಜ್ಯಲೋಭ .... .... .... | ೮೨ |
| ೧೨. | ದೀಪಾವಳೀ .... .... .... .... | ೯೩ |
| ೧೩. | ಪ್ರೇಮಬಂಧನ .... .... .... .... | ೯೭ |
| ೧೪. | ಸದಸದ್ವಿವೇಕ .... .... .... .... | ೧೦೦ |




# ಪಾತ್ರ ಪರಿಚಯ.



**ಲಾಖಾ** — ಮೇವಾರದ ರಾಣಾ.

**ಚಂಡಸಿಂಗ** — ಯುವರಾಜ.

**ರಘುದೇವ** — ಚಂಡನ ಸಹೋದರ

**ಮುಕುಲಸಿಂಗ** — ಹಂಸಿಯ ಪುತ್ರ.

**ಯಾದವ ಸೇನ** — ಪ್ರಧಾನ ಮಂತ್ರಿ.

**ಚೇಲಾರಾಮ** — ಸೇನಾಧಿಪತಿ.

**ಜಯಮಲ್ಲ** — ಕೋಶಾಧಿಕಾರಿ.

**ರೂಪಸಿಂಗ** — ದಂಡಾಧೀಶ.

**ರಣಮಲ್ಲ** — ಮಾರ್ವಾಡದ ರಾವ್.

**ಜೋದಾ** — ಯುವರಾಜ.

ರಾಜಮಾನ — ಜೋದನ ಸಹೋದರ.

ರಾಮಸಿಂಗ — ಮಂತ್ರಿ ಪ್ರಧಾನ

ಬೋಳಾನಾಥ — ಸೇನಾಧೀಶ

ವಿನಯಸೇನ — ದಂಡಾಧೀಶ.

ಮೋತೀಲಾಲ — ಕೋಶಾಧಿಕಾರಿ.

ಹಂಸಾಕುಮಾರಿ — ರಣಮಲ್ಲನ ಪುತ್ರಿ; ಲಾಖನ ಪತ್ನಿ

ಜಾನಕೀ (ಜಂಕಿ) - ರಾಮಸಿಂಗನ ಪುತ್ರಿ.

ಗಂಗಾಬಾಯಿ, ತಾರಾಬಾಯಿ, ಕಮಲಾವತಿ — ಅಸಿಕ್ಷಿಕೆಯರು.

ಚುನಿಲಾಲ, ಹೀರಾಲಾಲ — ಪ್ರತೀಹಾರಿಗಳು.

ಚಿತ್ರಿಕೆ — ಚಿತ್ರವರ್ತಕಿ.

ನರ್ತಕೀಜನರು, ದಂಡಿನ ಜನರು, ಆಹೇರಿಯರು ಮತ್ತು ಲಕ್ಷ್ಮೀಮಂದಿರದ ಅರ್ಚಕರು.



# ಅವತಾರಿಕೆ.



ಸಾಧಾರಣ ಐನೂರು ವರುಷಗಳಿಗೆ ಹಿಂದೆ ರಾಜಸ್ಥಾನದಲ್ಲಿ ಪ್ರಸಿದ್ಧವಾದ ಮೇವಾರ ಸಂಸ್ಥಾನಕ್ಕೆ ಸಿಸೋದಿಯಾ ವಂಶದ ಲಾಖಾರಾಣನು (ಲಕ್ಷ್ಮಣ?) ಅಧಿಪತಿಯಾಗಿದ್ದನು. ಒಂದು ದಿನ ರಾಣನು ಅಷ್ಟಪ್ರಧಾನರೊಂದಿಗೂ ಪುತ್ರರೊಂದಿಗೂ ರಾಜಸಭೆಯಲ್ಲಿ ಕುಳಿತಿದ್ದಾಗ, ಮಾರ್ವಾಡದ ರಾವ್ ರಣಮಲ್ಲ ರಾಠೋರನ ಕಡೆಯಿಂದ ಒಬ್ಬ ರಾಯಭಾರಿಯು ಬಂದು ಶ್ರೀಫಲವನ್ನು* ಸಮರ್ಪಿಸ ಹೋದನು. ವೃದ್ಧನಾದ ರಾಣನು, ತನ್ನಂತಹ ಮುದುಕನಿಗೆ ಇಂತಹ ಶ್ರೀಫಲವು ಆವಶ್ಯಕವಿಲ್ಲವೆಂದೂ, ರಾಠೋರರ ಕುಮಾರಿಯು ತನ್ನಂತಹನನ್ನು ವರಿಸಲೊಲ್ಲಳೆಂದೂ, ವಿನೋದಯುಕ್ತವಾದ ನುಡಿಗಳನ್ನಾಡಿ, ಕುಮಾರ ಚಂಡಸಿಂಗನಿಗೆ ಅದನ್ನು ಕೊಡ ಹೇಳಿದನು. ಕುಮಾರನಾದರೊ, ತನ್ನ ಜನಕನಾಡಿದ ವಚನಗಳ ಅಭಿಪ್ರಾಯದಿಂದ, ಆಕೆಯು ತನಗೆ ಮಾತೃವಾದಳೆಂದು ಗ್ರಹಿಸಿ, ಶ್ರೀಫಲವನ್ನು ಸ್ವೀಕರಿಸಲೊಲ್ಲದೆ, ಜನಕನೆ ಆಕೆಯನ್ನು ವರಿಸಬೇಕೆಂದು ಹಟಹಿಡಿದನು. ತಾನು ರಾಜ್ಯಕ್ಕೆ ಅಧಿಕಾರಿಯಾಗಿದ್ದರೂ, ತನ್ನ ಅಧಿಕಾರಾಪೇಕ್ಷೆಯನ್ನು ಬದಿಗೊತ್ತಿ, ತನ್ನ ಜನಕನು ಆ

*ಕನ್ಯೆಗೆ ತಕ್ಕವನೆಂದು ಕಂಡು ಬರುವ ವರನ ಬಳಿಗೆ ಮಂಗಳ ದ್ರವ್ಯಯುಕ್ತವಾದ ತೆಂಗಿನ ಕಾಯೊಂದನ್ನು, ಕಳುಹಿಕೊಡುವ ಪದ್ಧತಿಯು ರಾಜಪುತ್ರರಲ್ಲಿ ವಾಡಿಕೆಯಾಗಿತ್ತು. ಪತಿಭಿಕ್ಷಸೂಚಕವಾದ ಇದಕ್ಕೆ ಶ್ರೀಫಲವೆಂದು ಹೆಸರು. ರಕ್ಷಣೆಯನ್ನು ಬಯಸುವಲ್ಲಿ ಕಂಕಣಗಳನ್ನು ಕಳುಹಿಕೊಡುವುದು ಮತ್ತೊಂದು ಪದ್ಧತಿ.

ರಾಠೋರಕುಮಾರಿಯಾದ ಹಂಸಾಬಾಯಿಯನ್ನು ವರಿಸಿದರೆ, ಆಕೆಯಲ್ಲಿ ಜನಿಸುವ ಪುತ್ರನಿಗೆ ರಾಜ್ಯವನ್ನು ಮನಃಪೂರ್ವಕ ವಾಗಿ ಬಿಟ್ಟು ಬಿಡುವುದಾಗಿ ಏಕಲಿಂಗೇಶ್ವರನ ಮೇಲೆ ಆಣೆಯಿಟ್ಟು ಪ್ರತಿಜ್ಞೆ ಮಾಡುತ್ತಾನೆ. ನಿರ್ವಾಹವಿಲ್ಲದೆ ಲಾಖನು ಹಂಸಿ ಯನ್ನು ವರಿಸಬೇಕಾಯಿತು.

ಹಂಸಿಯಲ್ಲಿ ಮುಕುಳನೆಂಬ ಪುತ್ರನು ಜನಿಸುವನು. ಈತನು ಬಾಲಕನಾಗಿರುವಾಗಲೆ ಗಯಾ ಕ್ಷೇತ್ರಕ್ಕೆ ಬಂದಿದ್ದ ಮುಸಲ್ಮಾನರ ಮೇಲೆ ಲಾಖನು ದಂಡೆತ್ತಿ ಹೋಗಬೇಕಾಯಿತು. ಆ ಕಾಲದಲ್ಲಿ ಚಂಡನು ತಾನಾಗಿಯೆ ಮುಕುಲನನ್ನು ಸಿಂಹಾ ಸನದ ಮೇಲಿರಿಸಿ, ರಾಜಮಾತೆಯನ್ನು ರಕ್ಷಕಿಯನ್ನಾಗಿ ಮಾಡಿ, ಪಿತನೊಂದಿಗೆ ಗಯಾಕ್ಷೇತ್ರಕ್ಕೆ ಹೋಗುವನು. ಈ ಯುದ್ಧ ದಲ್ಲಿ ಲಾಖನು ಪರಂಧಾಮವನ್ನು ಸೇರುವನು. ಕೊನೆಗೆ ಚಂಡನು ಹಿಂದೆ ಬಂದು, ತಾನು ರಾಜಪ್ರತಿನಿಧಿಯಾಗಿ ಉತ್ತಮ ರೀತಿಯಿಂದ ಪ್ರಜಾಪಾಲನೆ ಮಾಡುವನು. ಕೆಲವು ಕಾಲಾ ನಂತರ ಚಪಲೆಯಾದ ರಾಣಿಯೂ ಆಕೆಯ ರಾಠೋರ ಬಂಧು ಗಳೂ ಬಂದುಗೂಡಿ ಮಾತ್ಸರ್ಯದಿಂದ ಚಂಡನನ್ನು ಅಧಿಕಾರ ದಿಂದ ಕಿತ್ತು ಹಾಕುವರು. ಚಂಡನು ಇನ್ನೂರು ಮಂದಿ ಆಹೇ ರಿಯೂ (ಬೇಟೆಗಾರರು) ಅನುಯಾಯಿಗಳೊಂದಿಗೆ ಹಲ್ಲರ ಪ್ರಾಂತ್ಯದಲ್ಲಿ ನೆಲಸುವನು.

ಇತ್ತ ರಣಮಲ್ಲನು ನಿಸ್ಸಾರವಾದ ಮಾರ್ವಾಡವನ್ನು ತ್ಯಜಿಸಿ ಸಾರವತ್ತಾದ ಮೇವಾರದಲ್ಲಿಯೆ ಕಾಲೂರುವನು. ಅನುದಿನವೂ ಮುಕುಲನನ್ನು ತೊಡೆಯ ಮೇಲಿರಿಸಿಕೊಂಡು, ತಾನು ಸಿಂಹಾಸನದಲ್ಲಿ ಕುಳಿತುಕೊಳ್ಳುವನು. ಒಂದು ದಿನ ರಣ ಮಲ್ಲನು ಸಿಂಹಾಸನದ ಮೇಲಿದ್ದಾಗ, ಮುಕುಲನು ಕೆಳಗಿಳಿದು

ಆಡುತ್ತಿದ್ದುದನ್ನು ಕಂಡು, ಬಾಲಕನ ಧಾತ್ರಿಯು ಸಿಟ್ಟುಗೊಂಡು ರಾಣಿಯಲ್ಲಿ ದೂರಿಡುವಳು. ರಾಣಿಯು ತನ್ನ ತಂದೆಯನ್ನು ಕರೆದು ಜರೆಯುತ್ತಲೆ, ಅಫೀಮಿಗೂ ಮದ್ಯಕ್ಕೂ ದಾಸನಾಗಿದ್ದ ಆ ರಣಮಲ್ಲನು, ಹಂಸಿಯು ತನ್ನ ಕುಮಾರಿಯೆಂಬುದನ್ನೂ ಮುಕುಲನು ತನ್ನ ಮೊಮ್ಮಗನೆಂಬುದನ್ನೂ ಎಣಿಸದೆ, ಆಕೆಯನ್ನು ತಿರಸ್ಕರಿಸಿ, ಬಾಲಕನ ಪ್ರಾಣವನ್ನು ಕೂಡ ಹರಣ ಮಾಡುವುದಾಗಿ ಗರ್ಜಿಸುವನು. ಚಂಡನ ಸಹೋದರನಾದ ರಘುದೇವನನ್ನು ವಿಷಲೇಪಿತ ವಸ್ತ್ರದಿಂದ ಕೊಲ್ಲಿಸುವನು. ದಿಗಿಲುಗೊಂಡ ರಾಣಿಯು ಪುನಃ ಚಂಡನ ಸಹಾಯವನ್ನು ಪಡೆಯುವ ಹಂಚಿಕೆಯನ್ನು ಹೂಡುವಳು.

ದೇಶವಾತ್ಸಲ್ಯಪೂರಿತನಾದ ಚಂಡನು, ಮಲತಾಯಿಯ ಅಪಚಾರಗಳೊಂದನ್ನೂ ಗಣಿಸದೆ, ಬಾಲರಾಣನನ್ನು ಉದ್ಧರಿಸುವುದಾಗಿ ವಾಗ್ದಾನ ಮಾಡಿ. ತನ್ನ ಆಹೇರಿಯರೆಲ್ಲರನ್ನೂ ಹಲವು ನೆವಗಳಿಂದ ಚಿತ್ತೂರನ್ನು ಸೇರಿಕೊಳ್ಳಲು ಪ್ರೇರೇಪಿಸುವನು.

ದೀಪಾವಳಿಯ ಕಾಲದಲ್ಲಿ ಚಿತ್ತೂರಿನ ಅರಸರು ಹಲವು ವಿಧಗಳಲ್ಲಿ ಧಾನಧರ್ಮಗಳನ್ನು ಮಾಡುವ ಪದ್ಧತಿ. ಅಂತೆಯೆ ಆ ಸರದಿಯ ಉತ್ಸವಗಳೆಲ್ಲವೂ ಚಿತ್ತೂರಿನಿಂದ ಎರಡು ಹರದಾರಿ ದೂರವಿರುವ ಗೋತುಂಡ (Gosoonda) ಎಂಬಲ್ಲಿ ನಡೆಸಬೇಕೆಂದು ಚಂಡನು ರಾಣಿಗೆ ಹೇಳಿಕೊಟ್ಟು, ಈ ಉಪಾಯದಿಂದ ರಾಣಿಯನ್ನೂ ಬಾಲಕನನ್ನೂ ರಣಮಲ್ಲನ ಸಾಮೀಪ್ಯದಿಂದ ತಪ್ಪಿಸಿ, ಆ ರಾತ್ರೆಯೆ ರಾಮಪಾಲವೆಂಬ ಉತ್ತರ ದ್ವಾರದಿಂದ ಪ್ರವೇಶಿಸಿ, ಚಿತ್ತೂರನ್ನು ವಶಮಾಡಿಕೊಳ್ಳುವನು.

ಮಾದಕದಿಂದಲೂ ಮದಿರೆಯಿಂದಲೂ ಮತ್ತನಾಗಿದ್ದ ಮಹಾ ರಾಣನು ಮದಿದಾಕ್ಷಿಯೊಬ್ಬಳ ಮೋಹಕ್ಕೆ ಮರುಳಾಗಿ, ಮಡಿಲಲ್ಲಿ ಮೈಮರೆತು ಮಲಗಿದ್ದನು. ದಾಸಿಯಾಗಿದ್ದ ಆ ಸುಂದರಿಯನ್ನು ರಣಮಲ್ಲನು ಬಲಾತ್ಕಾರದಿಂದ ವಶಮಾಡಿ ಕೊಂಡಿದ್ದ ಕಾರಣ, ಆಕೆಯು ಆತನ ಮೇಲಣ ಸೇಡು ತೀರಿಸಿ ಕೊಳ್ಳುವ ಬಗೆಯಿಂದ, ಚಂಡನು ಬಂದುದು ತನಗೆ ತಿಳಿದಿದ್ದರೂ ರಾಣನನ್ನು ಎಬ್ಬಿಸದೆ, ಆತನ ಮುಂಡಾಸಿನಿಂದಲೆ ಆತನನ್ನು ಮಲಗಿದ್ದ ಮಂಚಕ್ಕೆ ಗಟ್ಟಿಯಾಗಿ ಬಿಗಿದು, ತಾನು ಅಲ್ಲಿಂದ ಹೊರಟು ಹೋಗುವಳು.

ಚಂಡನೂ ದಂಡಿನವರೂ ಬಂದು ಸುತ್ತಲೂ ನಿಲ್ಲುತ್ತಲೆ, ದಿಟ್ಟನಾದ ರಣಮಲ್ಲನು, ತಟ್ಟನೆ ಪಡಿಗವನ್ನೆತ್ತಿಕೊಂಡು ನೆಟ್ಟಗೆ ನಿಲ್ಲಲು ಯತ್ನಿಸುವನು. ಆಗ ಆತನ ಮಂಚವು ಕೂಡ ಬೆನ್ನಿಗೆ ರಕ್ಷೆಯಂತೆ ಎದ್ದು ನಿಲ್ಲುವುದು. ಈ ವಿಚಿತ್ರ ನೋಟ ವನ್ನು ಕಂಡು ಎಲ್ಲರೂ ಗೊಳ್ಳೆಂದು ನಗುವರು. ಸಿಟ್ಟಿನಿಂದ ರಣಮಲ್ಲನು ಪಡಿಗವನ್ನೆಸೆದು ಕೆಲವರನ್ನು ಕೆಡಹುವನು. ಕೊನೆಗೊಬ್ಬ ಅಹೇರಿಯನ ತಿವಿತದಿಂದ ಪ್ರಾಣವನ್ನು ನೀಗು ವನು. ಆತನ ಪುತ್ರನಾದ ಜೋದನು ಓಡಿಹೋಗಿ ಹಾರ್ವ ಸಂಕುಳನೆಂಬ ಯೋಧಸನ್ಯಾಸಿಯ ಆಶ್ರಯವನ್ನು ಹೊಂದುವನು (ಈ ಜೋದನೆ ಈಗಿನ ಜೋಧಪುರವನ್ನು ಸ್ಥಾಪಿಸಿದವನು.)

ಆ ಮೇಲೆ ಚಂಡನು ಮುಕುಲನನ್ನು ಪುನಃ ಸಿಂಹಾಸನದ ಮೇಲಿರಿಸಿ ತಾನು ಪ್ರತಿನಿಧಿಯಾಗಿ ರಾಜ್ಯತಂತ್ರಗಳನ್ನು ನಡೆ ಸುವನು. (ಪ್ರಸಿದ್ಧ ಗಾಯಕಿಯಾದ ಮೀರಾಬಾಯಿಯು ಈ ಮುಕುಲನ ಮಗನಿಗೆ ಪತ್ನಿಯಾಗಬೇಕು.)

ಈ ರೀತಿಯು ಚರಿತ್ರೆಯು ಟೋಡ್ ಎಂಬವರು ಬರೆದ ರಾಜಸ್ಥಾನದ ಇತಿಹಾಸದಲ್ಲಿ* ಇರುವುದು. ವ್ಯಾಕರಣಕಾರರ ಲೋಪಾಗಮತತ್ವವನ್ನು ಇದರಲ್ಲಿಯೂ ಪ್ರಯೋಗಿಸಿ, ಮಂಗಳೂರಿನ ಗಣಪತಿ ಶಾಲೆಯ ವಿದ್ಯಾರ್ಥಿಗಳ ಸಲುವಾಗಿ ನಾಟಕರೂಪದಲ್ಲಿ ಬರೆದಿರುವ ಈ ಚರಿತ್ರೆಯು, ಇತರರಿಗೂ ಪ್ರಯೋಜನಕಾರಿಯಾದೀತೆಂಬ ಅಭಿಪ್ರಾಯದಿಂದ ಈಗಲಿದನ್ನು ಮುದ್ರಿಸಿರುತ್ತದೆ. ಇದರಲ್ಲಿರುವ ಕುಂದುಕೊರತೆಗಳನ್ನು ಮಹನೀಯರು ಮನ್ನಿಸುವರೆಂದು ನಂಬಿರುವ,

| | |
|---|---|
| ಮಂಗಳೂರು, | ಸಜ್ಜನ ವಿಧೇಯ, |
| ಕ್ರೋಧನ, ಪುಷ್ಯ ಪೂರ್ಣಿಮಾ. | ಕೆ. ಬಿ. ರಾಮಕೃಷ್ಣ. |



*Annals and Antiquities of Rajasthan by Lieu. Col. James Todd. Vol. I.

ಶ್ರೀ

# ಕಲಿಯುಗದ ಭೀಷ್ಮ.

## ೧. ಪ್ರಸ್ತಾವನ.

(ರಾಜಕುಮಾರಿಯು ಕೆಳದಿಯರೊಂದಿಗೆ ಕೆಲಸಮಾಡುತ್ತಿರುವಳು.)

ಹಂಸಿ— || ಮತ್ತಕೋಕಿಲ ||

**ನೀರಜಾವಳಿಗೇರೆ ಸಮ್ಮುದ ಸೂರನಾಗಮ ನಾಲದೆ |**
**ನೀರಜೇಕ್ಷಣ ತೋರಿ ತೋರಿರೆ ಯೋಗಿ ಯೋಗವ ನೀಗನೆ ||**
**ನೀರದಾಗಮ ಸೇರೆ ಸಂತಸ ಚಾತಕಂಗಳ ಜಾತಕೆ |**
**ನೀರಧೀಶ್ವರನೇರ ತೋರನೆ ತಾರಕೇಪತಿ ತೋರಿರೆ ||**

ಗಂಗಾ—ಭಲೆ! ಸೊಗಸಾಗಿದೆ, ಸೊಗಸಾಗಿದೆ!

ತಾರಾ—ಸೊಗಸಾಗದೆ ಏನೊ? ಎಷ್ಟಾದರೂ ಹಂಸಿಯಲ್ಲವೆ?

ಹಂಸಿ—ಸಾಕಪ್ಪಾ, ನಿಮ್ಮ ಚೇಷ್ಟೆ. ನಾನೇನೋ ಅಂದು ಕೊಂಡಿದ್ದೆ; ಎಷ್ಟಾದರೂ ಪರಿಹಾಸ?

ಜಂಕಿ—ಪರಿಹಾಸ? ಏನೂ ಇಲ್ಲ. ಇನ್ನೊಂದು ತಡವೆ ಹಾಡು ನೋಡೋಣ.

ಹಂಸಿ—ನಿಮಗೆ ಬೇರೆ ಕೆಲಸವಿಲ್ಲ. ಆ ಗಿಡದ ಬುಡ ಚೆನ್ನಾಗಿ ಬಿಡಿಸಬಾರದೆ?

ಜಂಕಿ—ಬಿಡಿಸೋಣವಂತೆ. ನೀನು ಮೊದಲು ಹಾಡುವುದಕ್ಕೆ ಆರಂಭಿಸು.

ಹಂಸಿ—ಅದೇನು, ನಾನು ಹಾಡದಿದ್ದರಾಗದೆ?

ತಾರಾ — ಖಂಡಿತವಾಗಿಯೂ ಆಗದು. ನೀನು ಹಾಡು, ನಾವೀ ಕೆಲಸ ಮಾಡುತ್ತೇವೆ.

ಹಂಸಿ—ಆಗಲಮ್ಮಾ, ನಿಮ್ಮ ರಗಳೆ!

|| ಮತ್ತಕೋಕಿಲ ||

ತಾರಕೇಪತಿ ತೋರೆ ತೋರದೆ ನೀರಿನಾಕರಕೇರಿಕೆ ।
ತಾರೆ ತೋರಲು ತೋರಲಾರದೆ ಮೀರಲಾರದೆ ಮೋದವು ॥

ತಾರಾ—ಛಿ, ಸಾಕು, ಸಾಕು! ಈ ಹಾಡು ಬೇಡ.

ಗಂಗಾ—ಸರಿ ಸರಿ. ಅದು ಬೇಡ, ನಾನು ಹಾಡುತ್ತೇನಂತೆ.

|| ತರಳ ||

ಸುದತಿಯೆಂಬೆನೆ ಸುಂದರೀಮಣಿ ಹಿಂದಕೊಂದಿಸೆ ದಂತವ ।
ಮುದವ ಮೀರಿದ ಮೊದ್ದು ಮೋರೆಯು ವಾರಿಜಾನನೆ ತಿದ್ದೆಯು ॥
ಮದಿರ ಲೋಚನೆಯೆಂಬೆನೇ ಸಖಿ ಮಾದಕಾಸವಕೊಲ್ಲೆನೆ ।
ವಿದಿತವಾಗದೆ ಮಾನಿನೀಮಣಿಯೆಂಬೆನೆಂತುಟೊ ಸುಂದರೀ ॥

ಹಂಸಿ — ಬಲು ಸೊಗಸಾಗಿದೆ.

ತಾರಾ—ಇದೇ ತಾನೆ ಸೊಗಸು? ನೀವು ಒಬ್ಬರ ಮೇಲೆ ಒಬ್ಬರು ನನ್ನನ್ನು ಕೆಣಕುವುದರಲ್ಲೆ ಇದ್ದೀರಿ.

ಗಂಗಾ — ನಾನೆಲ್ಲಿ ಕೆಣಕಿದೆ? ಹಾಡಿನ ಜೋಡಣೆ ಹಾಗಿದೆ.

ತಾರಾ — ಆ ಮೊದಲಿನ ಹಾಡೆ ಹಾಡಬಾರದೆ ಒಂದಿಷ್ಟು?

ಜಂಕಿ — ಪಾಪ! ಏತಕ್ಕೆ ಸುಮ್ಮನೆ ಕಾಟ? ಹಂಸಿ, ಹಾಡಿಬಿಡವ್ವ!

ಹಂಸಿ—ಆಗಲಿ ಮತ್ತೆ.

|| ತರಳ ||

ಗುಣವೆ ಗಂಡರ ಗಂಡುಮಾಡುವ ಚಂದ್ರಬಿಂಬದ ಬೆಂಬಲ ।
ಗುಣವೆ ಹೆಂಡಿರ ಹೆಣ್ಣುಮಾಡುವ ಚಂದನಾಂಬಿನ ಮುಂಬಲ ।
ಗುಣವಸಂತವೆ ಮೀನಕೇತನ ಕೋಮಲಾಂಬಿನ ಕಂಬಿಯೆ ॥

(ಹಾಡು ನಿಲ್ಲಿಸಿಬಿಟ್ಟು ಹುಡುಕಾಡುವಂತೆ ನಟಿಸುವಳು.)

ತಾರಾ — ಸರಿ—ಎಣ್ಣೆ ಬರುವಾಗ ಗಾಣ ಮುರಿಯಿತು!

ಗಂಗಾ — ಏನದು, ನಿಲ್ಲಿಸಿಬಿಟ್ಟೆ?

ತಾರಾ—ಏನು ಹುಡುಕಾಡುತ್ತಿರುವೆ?

ಜಂಕಿ—ಏನೆ ಹಂಸೀ, ಮಾತನಾಡುವುದಿಲ್ಲ? ಏನಾದರೂ ಬಿದ್ದು ಹೋಯಿತೇನು?

ಹಂಸಿ — ಏನೂ ಇಲ್ಲರವ್ವಾ!

ಜಂಕಿ — ಏನೂ ಇಲ್ಲವಾದರೆ ಮತ್ತೇನು ಹುಡುಕುತ್ತಿರುವೆ?

ತಾರಾ—ಹಾಗಲ್ಲರವ್ವಾ! ಏನೂ ಇಲ್ಲವೆಂದರೆ ತನಗೆ ಆ ಸಂದಿನೊಳಗೆ ಏನೂ ದೊರೆಯುವುದಿಲ್ಲವೆಂದರ್ಥ. ಅಷ್ಟು ಕೂಡ ತಿಳಿಯದೆ ನಿಮಗೆ?

ಗಂಗಾ— ನಾಕು ನಿನ್ನ ವ್ಯಾಖ್ಯಾನ. ನೀನು ಬಲು ಜಾಣೆ ಕಾಣವ್ವಾ!

ತಾರಾ—ಜಾಣೆಯೊ ಗೀಣೆಯೊ ನಾಕಾಣೆ!

ಜಂಕಿ—ಈಗ ನಿನ್ನ ನಾಕಾಣೆ ಜಾಣತನ ಹಾಗಿರಲಿ. ಹಂಸೀ, ಏನದು?

ಹಂಸಿ—ಮತ್ತೇನೂ ಇಲ್ಲ. ಇದೊ, ಇಲ್ಲಿ ನೋಡು, ಈ ಗಿಡ!

ಗಂಗಾ—ಈ ಗಿಡ? ನಾನೆಷ್ಟೊ ತಡವೆ ನೋಡಿದ್ದೇನೆ. ಅದೇನು ಹೊಸತು?

ತಾರಾ—ಸರಿ, ನಾನು ಹೇಳಲಿಲ್ಲವೆ? ಬರಿ ಗುಲ್ಲು ನಿದ್ದೆಗೇಡು! ಹಾಡಾದರೂ ಕೊಂಚ ಕೇಳಬಹುದಿತ್ತು.

ಹಂಸಿ—ಇದರಲ್ಲಿ ಆ ಹಾಡಿಗಿಂತಲೂ ವಿಶೇಷ ತರದ ಸಂಗತಿಯಿದೆ.

ತಾರಾ—ಏನು ವಿಶೇಷವೊ? ಮುಟ್ಟಿದರೆ ಮುಚ್ಚಿಕೊಳ್ಳುತ್ತದೆ.

ಹಂಸಿ—ಏಕೆ?

ತಾರಾ—ಏಕೆ?

ಜಂಕಿ—ಏಕೆ?

ತಾರಾ — ಏಕೆಂದರೆ? ಮುಚ್ಚಿಕೊಳ್ಳುತ್ತದೆ!

ಗಂಗಾ—ಅದು ನಮಗೆ ಗೊತ್ತಿದೆ.

ತಾರಾ—ಗೊತ್ತಿದ್ದರೆ ಮತ್ತೇನು ಕೇಳುವುದು?

ಹಂಸಿ—ಹಾಗಲ್ಲ. ಏತಕ್ಕೆಂದು ತೋರಿಸಲೆ?

ತಾರಾ—ಹೂಂ! ತೋರಿಸು.

ಹಂಸಿ—(ಕಲ್ಲು ಹರಳು ಹಿಡಿದುಕೊಂಡು) ಇದೊ, ಬಾಯಿ ತೆರೆ.

ತಾರಾ—ಹೂಂ! (ಬಾಯಿ ತೆರೆವಳು. ಹಂಸಿಯು ಹರಳು ಹಾಕಹೋಗುವಳು.) ಹ್ಞಾ! (ಬಾಯಿ ಮುಚ್ಚುವಳು.)

ಹಂಸಿ—ಏನು ಮುಚ್ಚಿಬಿಟ್ಟೆ?

ತಾರಾ—ಮುಚ್ಚದೆ ಮತ್ತೆ? ಅಹಹ, ಒಳ್ಳೆ ಗಡುಸುಗಾರ್ತಿ! ನನ್ನ ಬಾಯೊಳಗೆ ಕಲ್ಲು ಹಾಕಬೇಕೆಂದಿದ್ದೆಯಲ್ಲವೆ?

ಹಂಸಿ—ಒಂದು ವೇಳೆ ಲಡ್ಡುಗೆಯಾಗಿದ್ದರೇನು ಮಾಡುತಿದ್ದೆ?

ತಾರಾ—ಏನು ಮಾಡುತಿದ್ದೆ? ನುಂಗಿಬಿಡುತಿದ್ದೆ!

ಹಂಸಿ—ಬಾಯಿ ಮುಚ್ಚಿಕೊಳ್ಳುತಿದ್ದೆಯಾ?

ತಾರಾ—ಅಲ್ಲವೆ ಮತ್ತೆ? ಅದು ಬಿದ್ದುಹೋದರೆ?

ಹಂಸಿ—ಸರಿ. ನಿನ್ನ ಹಾಗೆಯೆ, ಈ ಗಿಡ ಕೂಡ ಬೇಕಾದುದನ್ನು ತಿನ್ನುವುದೂ ಉಂಟು. ಬೇಡದುದನ್ನು ಬಿಡುವುದೂ ಉಂಟು!

ಗಂಗಾ—ಹೇಗೆ? ಅದಕ್ಕೆ ಬಾಯೆಲ್ಲಿದೆ?

ಹಂಸಿ—ಎಲೆಗಳಲ್ಲಿ ಚಿಕ್ಕ ಚಿಕ್ಕ ರಂಧ್ರಗಳಿವೆ ಅವೇ ಅದಕ್ಕೆ ಸಾವಿರಾರು ಬಾಯಿಗಳು.

ತಾರಾ—ಒಂಕೀ! ದೂರ ನಿಲ್ಲವ್ವಾ; ನಿನ್ನನ್ನು ಕೂಡ ನುಂಗಿಬಿಟ್ಟಾವು!

ಹಂಸಿ—ಏನೆ ಹುಚ್ಚಿ! ಒಂದು ಚೀಲ ತುಂಬ ರೊಟ್ಟಿ ನೀನೊಬ್ಬಳೆ ತಿನ್ನಬಲ್ಲೆಯ?

ತಾರಾ—ಒಂದೊಂದು ಬಾಯಿಗೆ ಒಂದೊಂದು ತುತ್ತೆಂದರೆ ಸಾವಿರಾರು ತುತ್ತುಗಳಾದುವಷ್ಟೆ!

ಹಂಸಿ—ಆದರೆ ಆ ತುತ್ತುಗಳು ಬಲು ಚಿಕ್ಕವು.

ತಾರಾ—(ಕಲ್ಲು ಹಿಡಿದುಕೊಂಡು) ನೋಡೋಣ, ಹಾಗಾದರೆ! ಹಾಕಲೆ?

ಹಂಸಿ—ಏನದು?

ಗಂಗಾ—ಕಲ್ಲು.

ಹಂಸಿ—ಆಹಾ, ಬಲು ಜಾಣೆ! ಕಲ್ಲು ನಿನಗಾಗದಂತೆ; ಅದಕ್ಕೆ ಮಾತ್ರ ಆಗುವುದೇನು?—(ತಾರೆ ಕಲ್ಲು ಹಾಕುವಳು.)

ಜಂಕಿ—ಬಾಯೇನೂ ಮುಚ್ಚಿಕೊಳ್ಳಲಿಲ್ಲ.

ಹಂಸಿ—ಹೇಗೆ ಮುಚ್ಚಿಕೊಂಡೀತು? ತನಗೆ ಯಾವುದು ಬೇಕು, ಯಾವುದು ಬೇಡ ಎಂಬುದನ್ನು ತಿಳಿದುಕೊಳ್ಳುವ ಸಾಮರ್ಥ್ಯವಿದೆ ಅದಕ್ಕೆ!

ತಾರಾ—ಅಪ್ಪ!

ಜಂಕಿ—ಹಾಗಾದರೆ ಅದು ತಿನ್ನುವುದೇನು?

ಹಂಸಿ—ಏನಾದರೂ ಸೊಣಗಳು, ಸೊಳ್ಳೆಗಳು, ಚಿಕ್ಕ ಚಿಕ್ಕ ಹುಳುಗಳು ಬಂದು ಕೂತರೆ ಕೂಡಲೆ ಹಿಡಿದುಕೊಂಡು ಬಿಡುವುದು.

ತಾರಾ—ಗಂಗೂ, ನಿಲ್ಲು ನಿಲ್ಲು. (ತಲೆ ಹಿಡಿಯುವಳು)

ಗಂಗಾ—ಇಸ್ಸಿಯಪ್ಪ! ಏನು ಮಾಡುತ್ತಿರುವೆ?

ತಾರಾ—ಕೊಂಚ ತಾಳೆ!

ಜಂಕಿ—ಹೇನು ಹೆಕ್ಕುತ್ತಿರುವೆಯಾ?

ತಾರಾ—ಮತ್ತೆ ಬೇರೇನು ಕ್ರಿಮಿಗಳಿವೆ ಇಲ್ಲಿ?

ಹಂಸಿ—ಅದೂ ಆಗಬಹುದು; ಇದ್ದರೆ ಹಾಕಿ ನೋಡು.

ಗಂಗಾ—ಬೇಡವೆ! ಬಿಡೆ ನನ್ನ ತಲೆ! ನನ್ನ ತಲೆಯೊಳಗಿಲ್ಲ ಕಾಣೆ! (ಬಿಡಿಸಿಕೊಳ್ಳುವಳು.)

ತಾರಾ—(ಹಂಸಿಯು ಬಳ್ಳಿಯಿಂದ ಹೆಕ್ಕಿದುದನ್ನು ಕಂಡು) ಏನದು?

ಹಂಸಿ—ಕೆಂಜಿಗ. ಹಾಕಲೆ?

ಗಂಗಾ—ಹೂಂ! ಹಾಕು. (ಹಾಕುವಳು.)

ತಾರಾ—ನೋಡೋಣ ಈಗ, ಹಾ! (ಮುಚ್ಚಿಕೊಳ್ಳುವುದು.)

ಜಂಕಿ—ಅಯ್ಯಪ್ಪ! ಏನಾಶ್ಚರ್ಯ! ಇವು ರಾಕ್ಷಸ ಜಾತಿಯವು: ಮಾಂಸ ತಿನ್ನುತ್ತವೆ!

ಗಂಗಾ—ನೋಡು, ಅದರ ಹೂ ಎಷ್ಟು ಚೆನ್ನಾಗಿದೆ?

ಹಂಸಿ—ಚೆನ್ನಾಗಿರುವ ವಸ್ತುಗಳೆಲ್ಲವೂ ಒಳ್ಳೆಯವೆ ಎಂದು ಹೇಳ ಲಾಗುವುದಿಲ್ಲ.

ತಾರಾ—ಅದು ನಿಜ. ಲೋಕದಲ್ಲಿ ಜನರು ಕೂಡ ಹಾಗೆಯೆ ಇಲ್ಲವೆ? ಹೊರಗಿನಿಂದ ತಣ್ಣಗಿನ ನೋಗು, ಒಳಗಿನಿಂದ ಮಾತ್ರ ಕ್ರೂರ ಸ್ವಭಾವ.

ಜಂಕಿ—ರಾವಣ ಸನ್ಯಾಸಿಯಲ್ಲವೆ?

ಹಂಸಿ—ಕೆಲವು ಜಾತಿಯ ವಿಷವು ಕಲ್ಲುಸಕ್ಕರೆಯಂತೆಯೆ ಕಾಣಿಸು ವುದು. ತಿಂದುಬಿಟ್ಟರೆ ಮಾತ್ರ ಪ್ರತೀಕಾರವೆ ಇಲ್ಲ.

ಗಂಗಾ—ಆಶ್ಚರ್ಯ ಆಶ್ಚರ್ಯ! ಇಂತಹುದನ್ನು ನಾನಿದು ತನಕ ಕಂಡೂ ಇಲ್ಲ, ಕೇಳಿಯೂ ಇಲ್ಲ.

ಹಂಸಿ—ಇವೇನೊ ಬಲು ಚಿಕ್ಕವು. ಇವಕ್ಕಿಂತಲೂ ಎಷ್ಟೊ ದೊಡ್ಡವು ಇವೆ. ಸಾಧಾರಣ ತರದ ಹಕ್ಕಿಗಳನ್ನೂ, ಮೃಗಗಳನ್ನೂ ನುಂಗಿಬಿಡುವ ಗಿಡಗಳು ಕೂಡ ಇವೆ!

ಗಂಗಾ—ಅಯ್ಯಬ್ಬಾ! ಎಲ್ಲಿ? ನಮಗೊಂದು ತೋರಿಸು ನೋಡೋಣ.

ಹಂಸಿ—ಇಲ್ಲೆಲ್ಲಿ? ದೊಡ್ಡ ದೊಡ್ಡ ಮಲೆ ಸೀಮೆಗಳಲ್ಲಿವೆಯಂತೆ.

ತಾರಾ—ಏನಪ್ಪ! ಎಲ್ಲವೂ ಅಂತೆ ಅಂತೆ!

ಹಂಸಿ—ಅಂತೆಯಾದರೇನು? ಸುಳ್ಳೆಂದೆಣಿಸಿರುವೆಯ? ನಮ್ಮ ಅಪ್ಪಾಜಿ ಯವರೊಡನೆ ಗುರುಗಳು ನಿನ್ನೆ ಏನೇನೊ ಮಾತನಾಡುತಿದ್ದರು. ವನಸ್ಪತಿಗಳ ವಿಷಯ ಕೂಡ ಪ್ರಸ್ತಾಪ ಬಂದಿತ್ತು. ಆಗ ಇದನ್ನೆಲ್ಲ ವಿವರಿಸಿ ಹೇಳಿದರು.

ತಾರಾ—ರಾಣಾಜಿಯವರು ಇದನ್ನು ನಂಬಿದರೆ?

ಹಂಪಿ—ನಂಬದೆ ಮತ್ತೆ? ಗುರುಗಳು ಸುಳ್ಳಾಡುತ್ತಾರೇನು? ನಮಗಿರುವಂತೆಯೆ ಗಿಡಗಳಿಗೆ ಕೂಡ ಇಂದ್ರಿಯಗಳಿವೆಯಂತೆ. ನಮ್ಮ ಹಾಗೆಯೆ ಸಕಲ ವ್ಯಾಪಾರಗಳನ್ನೂ ಮಾಡುತ್ತಿವೆಯಂತೆ.

ಗಂಗಾ— ಬಲು ಸೋಜಿಗ!

ಜಂಕಿ—ಬಲು ಸೋಜಿಗ!

ತಾರಾ—(ಬರುತ್ತಿರುವ ಚಿತ್ರವರ್ತಕಿಯನ್ನು ತೋರಿಸಿ) ಅಗೋ! ಅಲ್ಲಿ ಕೂಡ ಒಂದು ಸೋಜಿಗವಿದೆ.

ಗಂಗಾ— ಏನು ಸೋಜಿಗ?

ಜಂಕಿ— ಏನೇ ಚಿತ್ತಿಗರವ್ವಾ! ಏನು ತಂದಿರುವೆ?

ಚಿತ್ರಿಕೆ—ಬಾಯಿಸಾಹೇಬ! ಮತ್ತೇನು ತರಲಿ?

ತಾರಾ— ಸರಿ ಸರಿ. ಜಂಕೀ, ನಿನಗೆ ಬಾಯಿಸಾಹೇಬಳಿಗೆ ಬಾಬಾಸಾಹೇಬರನ್ನು ತಂದಿರುವಳಂತೆ!

ಜಂಕಿ— ನನಗೇಕೊ? ನಿನಗಾಗಿರಬಹುದು.

ಗಂಗಾ— ಏನಿರವ್ವಾ! ನಿಮಗೊಂದಿಷ್ಟಾದರೂ ನಾಚಿಗೆಯಿಲ್ಲವೇನು?

ಹಂಪಿ— ನಾಚಿಗೆಯೇನದರಲ್ಲಿ? ಮದುವೆಯೆಂದರೆ ಅಷ್ಟು ಹೀನಕರವೆ?

ತಾರಾ—ಲೋಕರೂಢಿ.

ಹಂಪಿ— ಸರಿ ಸರಿ.

ಚಿತ್ರಿಕೆ—(ಚಿತ್ರಗಳನ್ನು ತೋರಿಸುತ್ತ) ರಾಣೀ ಸಾಹೇಬ! ನೋಡೋಣಾಗಲಿ.

ತಾರಾ—ಯಾರನ್ನು? ರಾಣಾ ಸಾಹೇಬರನ್ನೆ?

ಹಂಪಿ—ಸಾಕೆ ನಿನ್ನ ಕುಚೇಷ್ಟೆ!

ತಾರಾ— ಆಗಲಿ ನೋಡೋಣವಂತೆ! ಇನ್ನೆಷ್ಟು ದಿನ ಮದುವೆಯಾಗದೆ ಕನ್ನಿಕೆಯಾಗಿಯೆ ಇರುವೆ?

ಹಂಪಿ—ಚಿತ್ತಿಗರವ್ವಾ! ಇವೆಲ್ಲ ಯಾರ ಚಿತ್ರಗಳು, ಗೊತ್ತಿದೆಯೆ?

ಚಿತ್ರಿಕೆ—ಅಲ್ಲವೆ ಮತ್ತೆ? ಗೊತ್ತಿದೆ. ಇವರೆಲ್ಲ ಅರಸು ಮನೆತನದವರು.

ಹಂಸಿ—ಯಾವ ಅರಸು?

ತಾರಾ—ಎಲ್ಲವೂ ಸರಿಯಾಗಿ ಹೇಳೆ. ಇವಳಾರು? ಇವಳಾರು?

ಚಿತ್ರಿಕೆ—ಹೇಳುತ್ತೇನಿರವ್ವಾ ಹೇಳುತ್ತೇನೆ! (ತೋರಿಸಿ) ಇವರೆ? ಇವರು ಪದ್ಮಿನೀದೇವಿ.

ಹಂಸಿ—ಏನೆ ತಾರೆ? ಚೆನ್ನಾಗಿದ್ದಾಳಲ್ಲವೆ?

ಚಿತ್ರಿಕೆ—ಇಗೋಳಿರವ್ವಾ! ರಾಣಿ ಸಂಯುಕ್ತಾದೇವಿ.

ಹಂಸಿ—ಬೊಟ್ಟೇಕೆ ಇಲ್ಲ?

ತಾರಾ—ವಿಧವೆಯೊ ಏನೊ.

ಚಿತ್ರಿಕೆ—ಅಲ್ಲರವ್ವಾ ಅಲ್ಲ! ನನ್ನ ಮಗ ಈ ಚಿತ್ರ ಬರೆದವನು. ಎಲ್ಲಿ ಮರೆತುಬಿಟ್ಟನೊ ಏನೊ.

ಜಂಕಿ—ನಿಮಗೆ ಕಣ್ಣಿಲ್ಲ. ನೋಡಬಾರದೆ ಸರಿಯಾಗಿ?

ಹಂಸಿ—ಓಹೊ! ಇದೆ ಇದೆ. ಚೆನ್ನಾಗಿ ಕಾಣಿಸುವುದಿಲ್ಲ.

ತಾರಾ—ಅಹುದಹುದು.

ಗಂಗಾ—ಹಲ್ಲು ಕೊಂಚ ಉಬ್ಬಿಕೊಂಡ ಹಾಗಿಲ್ಲವೆ?

ಜಂಕಿ—ತಲೆ ಹಿಕ್ಕುವುದಕ್ಕೆ ಕೂಡ ಬಾರದು. ನೋಡು, ಬೈತಲೆ ನೆಟ್ಟಗಿಲ್ಲ!

ತಾರಾ—ಪಾಪ! ಸುವರ್ಣಪುತ್ಥಳಿಯ ಹೆಂಡತಿ ಮತ್ತೇನು ತಾನೆ ಮಾಡಿಯಾಳು?

ಚಿತ್ರಿಕೆ—ಅದು ಹೋಗಲವ್ವಾ! ಇದು ನೋಡಿರಿ. ಶ್ರೀಮತೀ ರಾಣಿ ಕಮಲಸುಂದರೀಬಾಯಿ! ರಾಜಕುಮಾರೀ . . . . . . .

ಜಂಕಿ—ಅಯ್ಯೊಬ್ಬಾ!

ಚಿತ್ರಿಕೆ—ರಾಜಕುಮಾರೀ ತಾರಾದೇವಿ!

ಹಂಸಿ—ತಾರೆ! ನೋಡೆ ನಿನ್ನ ಚಿತ್ರ!

ತಾರಾ—ಇಸ್ಸಿಯಪ್ಪ! ಇದು ನನ್ನದಲ್ಲ. ನನ್ನ ಮುಖ ಹೀಗೇನೂ ಬಾತುಕೊಂಡಿಲ್ಲ.

ಹಂಸಿ—ಕಣ್ಣು?

ತಾರಾ—ನನ್ನದೇನು? ಗಿಡುಗನ ಕಣ್ಣಲ್ಲ!

ಚಿತ್ರಿಕೆ—ಅಮ್ಮಣ್ಣಿಯವರೆ, ನೋಡಿರಿ! ಜಯಿಸಲ್ಮೀರಿನ ರಾಣೀ ಸಾಹೇಬ್ ಚಂಚಲಕುಮಾರೀದೇವಿ!

ಹಂಸಿ—ಹೂಂ!

ತಾರಾ—ಹೂಂ! ಚಿತ್ತಿಗರವ್ವಾ! ಎಲ್ಲ ಹೆಂಗುಸರ ಚಿತ್ರವೆ! ಗಂಡಸರ ಚಿತ್ರವಿಲ್ಲವೇನು?

ಚಿತ್ರಿಕೆ—ಇದೆ. ಇದೆ. ತೋರಿಸುತ್ತೇನೆ.

ಗಂಗಾ—ಜಂಕೀ!!

ಜಂಕಿ—ಇರಲಿ ಇರಲಿ. ನಮ್ಮ ತಾರಾಬಾಯಿಗೆ ಗಂಡನ ಚಿಂತೆ ಹಿಡಿದಿದೆ!

ತಾರಾ—ನನಗೊಬ್ಬಳಿಗೇನೊ?

ಚಿತ್ರಿಕೆ—ನೋಡಿರವ್ವಾ! ಇವರು—ಇವರು—ನೇಪಾಳರಾಜರು!

ಗಂಗಾ—ಸರಿ ಸರಿ ತಾರೆ, ಜಡಬೇಡ! ಸದಾಕಾಲವೂ ಸೆಕೆ ಸೆಕೆ ಎಂದು ಕೂಗುತ್ತಿರುವೆ. ನೇಪಾಳ ಚಳಿರಾಜ್ಯವಂತೆ-ಒಳ್ಳೆಯ ವರ!

ತಾರಾ—ನಿನಗೆನೇ ಇರಲಿ. ಪಾಪ! ಚಳಿಯಿಂದ ಒದ್ದಾಡುತ್ತಿರುವೆ. ಇದೊ, ಈತನ ಗಡ್ಡವನ್ನು ಕತ್ತರಿಸಿಕೊಂಡರೆ ಒಂದು ಕಂಬಳಿಯನ್ನೆ ಮಾಡಬಹುದು!

ಹಂಸಿ—ಆಕೊ, ಅದೇನು ಚಿತ್ರ?

ಚಿತ್ರಿಕೆ—ಅದು ಬೇಡವಮ್ಮಣ್ಣಿ!

ತಾರಾ—ಬೇಡವೇಕೆ? ನೋಡೋಣ.

ಹಂಸಿ— ಅಪ್ಪಾಜಿಯವರದೆ? ನೋಡೋಣ. ತಾರೆ, ಚೆನ್ನಾಗಿದೆ ಯಲ್ಲವೆ? ನಮ್ಮ ಜೋದನದಿಲ್ಲವೇನು?

**ಚಿತ್ರಿಕೆ**—ಇದೆ ಇದೆ. (**ತೋರಿಸುವಳು.**)

ಹಂಸಿ—ಚೆನ್ನಾಗಿದೆ.

ತಾರಾ—ಸೊಗಸಾಗಿದೆ.

**ಚಿತ್ರಿಕೆ**—ಇವರು ಮೇವಾರದ ಲಾಖಾರಾಣರು! ಇವರು ಯುವರಾಜ ಚಂಡಸಿಂಗ್! ಇದು ಬಿಕಾನೀರ್ ದೇಶದ ಅರಸರ ಚಿತ್ರ. ಅರ್ಜುನ ಸೇನರು. ಇವರು ಮಹಾರಾವ್ ದುರ್ಜನ ಸಾಲರು. ಹಿಮವತ್ಸಿಂಗ್ ಝಾಲಾ! (**ಬೇರೆ ಬೇರೆ ಚಿತ್ರಗಳನ್ನು ಹೆಸರಿಸುವಳು.**)

ಹಂಸಿ—ಇರಲಿ ಇರಲಿ. ಇವೆಲ್ಲ ಈಗ ನೋಡುವುದಕ್ಕೆ ಅವಕಾಶ ಸಾಲದು.

ಗಂಗಾ—ಗೌರೀ ಪೂಜೆಯಾಗಬೇಡವೆ?

ಜಂಕಿ—ಅಹುದು. ಹೊತ್ತು ಹೋಗುತ್ತ ಬಂತು.

ಹಂಸಿ—ಸರಿ. ಚಿತ್ರಿಗರವ್ವಾ! ನೀನು ನಾಳೆ ಬಾ. ಇವೆಲ್ಲ ಇಲ್ಲಿರಲಿ.

**ಚಿತ್ರಿಕೆ**—ಆಗಲವ್ವಾ! ಹೋಗಿಬರುತ್ತೇನೆ. (**ಹೋಗುವಳು.**)

ಹಂಸಿ—ಒಳ್ಳೆಯದು. ಜಂಕೀ, ಬೇಗನೇ ಹೂ ಕೊಯ್ದುಕೊಂಡು ಬನ್ನಿ. ನಾನು ಈ ಗಿಡಕ್ಕೊಂದಿಷ್ಟು ನೀರು ಹಾಕಿ ಬಿಡುತ್ತೇನೆ.

ತಾರಾ—ಆಗಲಿ ಆಗಲಿ! ಗಂಗೂ, ಹೊರಡು; ಜಂಕೀ, ಬಾ! ಹಂಸೀ ಹಂಸೀ, ನಾವು ಬರುವುದೊಳಗಾಗಿ ಚಿತ್ರಗಳನ್ನೆಲ್ಲ ನೋಡಿಟ್ಟುಕೊ ಬಲ್ಲೆಯ?

ಹಂಸಿ—ಛೀ ತಾರೆ! ಎಂತಹ ಮಾತು! ನಾನೂ ಬರಲೆ ನಿಮ್ಮೊಂದಿಗೆ?

ತಾರಾ—ಬೇಡ ಬೇಡ. ನೀನು ಆ ಗಿಡಕ್ಕೆ ನೀರನ್ನೆ ಹಾಕುತ್ತಿರು

**(ಸಖಿಯರು ಹೋಗುವರು. ಹಂಸಿಯು ಅತ್ತಿತ್ತ ನೋಡಿ, ಯಾರೂ ಇಲ್ಲವೆಂದು ತಿಳಿದು, ಚಿತ್ರಗಳನ್ನು ಪರಿಶೀಲಿಸಿ, ಮೇವಾರದ ಚಂಡಸಿಂಗನ**

ಚಿತ್ರದಲ್ಲಿ ನಟ್ಟ ಮನಸುಳ್ಳವಳಾಗುವಳು. ಪ್ರತಿಭಾಶಾಲಿನಿಯಾದ ತಾರೆಯು ಮೆತ್ತಗೆ ಬಂದು ನೋಡಿ, ಇತರರನ್ನು ಸನ್ನೆಯಿಂದ ಕರೆದು ತೋರಿಸುವಳು. ಅರೆಗಳಿಗೆಯ ಮೇಲೆ ಏನೂ ಅರಿಯದವರಂತೆ ಹತ್ತಿರ ಬರುವರು.)

ತಾರಾ—ಗಂಗೂ, ಇನ್ನೂ ಆಗಲಿಲ್ಲವೇ? ಜಂಕೀ, ಅಯ್ಯೋ ನಿನ್ನ ಚೆಂದವೆ? ಹೂಗಳನ್ನೆಲ್ಲ ಕೆಳಕ್ಕೆ ಚೆಲ್ಲುತ್ತಿಯಾ? ಒಸ್ನಿ, ಸಾಕಿನ್ನು. ಹಂಸೀ, ಆಯಿತೇನವ್ವಾ ನಿನ್ನ ಕೆಲಸ? (ಸಖಿಯರ ಸದ್ದು ಕೇಳುತ್ತಲೆ ಹಂಸಿಯು ಚಿತ್ರಗಳನ್ನು ಅಲ್ಲೆ ಒಗೆದು, ಬಿಂದಿಗೆಯನ್ನು ಗಿಡದ ಬುಡಕ್ಕೆ ಬಾಗಿಸುವಳು.)

ಹಂಸಿ—ಹೂಂ! ಆಗುತ್ತ ಬಂತು.

ಗಂಗಾ—ಆಹುದು! ಆಗುವುದೆಂದರೆ ತಾನೆ ಹೇಗೆ? ತಾರೆಗೆ ಅವಸರ ಹೆಚ್ಚು!

ಜಂಕಿ—ಸಮಾಧಾನದಿಂದ ಒಂದು ಕೆಲಸ ಮಾಡುವುದಕ್ಕಿಲ್ಲ. ಎಲ್ಲಿ ಹೋದರೂ ಗಡಿಬಿಡಿ!

ತಾರಾ—ನಾನೆ ಗಡಿಬಿಡಿ ಮಾಡಿದವಳು? ನಿಮ್ಮ ನಿಮ್ಮ ಕೆಲಸ ನೀವು ನೀವು ಮಾಡುತಿದ್ದರೆ ನಾನು ಅಡ್ಡಿ ಮಾಡುತ್ತೇನೇನು?

(ಎಲ್ಲರೂ ನಗುತ್ತಿರುವರು.)

ಹಂಸಿ—ಏನೆ ನಗುತ್ತಿರುವಿರಿ?

ತಾರಾ—ಏನೂ ಇಲ್ಲವ್ವಾ! ಬರಿಯ ಬಿಂದಿಗೆ ಬಗ್ಗಿಸುತ್ತಿರುವೆಯಷ್ಟೆ! ಅದೇನು ಇಂದ್ರಜಾಲವೇನು?

ಹಂಸಿ—(ನಾಚಿಕೊಂಡು) ಓಹೊ! ನೀರು ಸೋರಿಹೋಯಿತೊ ಏನೊ. ಕೊಂಚ ತಾಳಿ ತರುತ್ತೇನೆ. (ತರಲು ಹೋಗುವಳು.)

ತಾರಾ—(ನಗುತ್ತಿರುವ ಗಂಗೆಗೆ)—ಸುಟ್ಟ ಮೋರೆಯವಳೆ! ನಿನ್ನ ಹರಿಕು ಬಾಯಿ ಸುಮ್ಮಗಿರಲೊಲ್ಲದೇನು?

ಗಂಗಾ—ಹೊಡೆಯ ಬೇಡ ಕಾಣೆ! ಸುಮ್ಮಗಿರುತ್ತೇನೆ.

ತಾರಾ—ಎಲ್ಲಾದರೂ ಉಸಿರಾಡಿದೆ! ಹಲ್ಲೆಲ್ಲ ಉದಿರಿಸಿ ಬಿಡುತ್ತೇನೆ ನೋಡು! (ಹಂಸಿ ಬರುವಳು. ಪುನಃ ಎಲ್ಲರೂ ನಗುವರು.) ನೀರು ತಂದಿಯೇನು?

ಹಂಸಿ—ಹೂಂ! ಇದೇನು ನಿಮಗೆ ದೆವ್ವ ಹಿಡಿದಿದೆ? ಆಗಿನಿಂದ ನಗುತ್ತಿರುವಿರಿ!

ಗಂಗಾ—ನಗದೆ ಮತ್ತೇನು?

ತಾರಾ—ಅಗೊ, ಅಲ್ಲಿ ನೋಡು, ಕೊಳದಲ್ಲಿ.

ಹಂಸಿ—ಕಮಲವೇ?

ತಾರಾ—ಅಲ್ಲ; ರಾಜಹಂಸಿ.

ಹಂಸಿ—ಅಹುದು, ತೇಲುತ್ತಿರುವುದು.

ತಾರಾ—ಪಾಪ! ಅದಕ್ಕೆ ಚಿಂತೆ ಹಿಡಿದಿದೆ.

ಹಂಸಿ—ಏತರ ಚಿಂತೆಯಪ್ಪ ಅದಕ್ಕೆ?

ತಾರಾ—ಏತರದೆಂದರೆ? ತನ್ನ ಹಂಸವಿಲ್ಲವೆಂದು.

ಹಂಸಿ—ಆಚೆಗಡೆ ಇದೆಯಷ್ಟೆ?

ತಾರಾ—ಆಚೆಗಡೆಯಿದ್ದರೇನು? ಹತ್ತಿರವಿದ್ದಂತಾಯಿತೆ?

(ಎಲ್ಲರೂ ನಗುವರು.)

ಹಂಸಿ—ನೀವು ನಗುವುದೇತಕ್ಕೆ?

ತಾರಾ—ಹಂಸಿಗೆ ಚಿಂತೆ ಹಿಡಿದಿದೆಯೆಂದು!

ಹಂಸಿ—ಅದಕ್ಕೆ ನಗಬೇಕೆ? ಏನಪ್ಪ! ನನಗೊಂದೂ ಅರ್ಥವಾಗುವುದಿಲ್ಲ.

ಗಂಗಾ—ಏನೆ ತಾರೆ? ವ್ಯಾಖ್ಯಾನ ಮಾಡಬಾರದೇನು?

ಹಂಸಿ—ಅಂತಹ ವ್ಯಾಖ್ಯಾನಗಳ ಅವರವರೆ ಮಾಡಿಕೊಳ್ಳಬೇಕಷ್ಟೆ.

ಹಂಸಿ—ಹೂಂ! ಹೋಗೋಣ ನಡೆಯಿರಿ.

ತಾರಾ—ಸರಿ, ಹೋಗೋಣ! (ಹೊರಡುವರು)

ಗಂಗಾ—ಚಿತ್ರ?

ತಾರಾ—ಸುಮ್ಮಗಿರೆ!

ಗಂಗಾ—ನಾನು ತರಲೆ?

ತಾರಾ—ನಿನಗವಶ್ಯವಿದ್ದರೆ ತಾ. ನನಗೆ ಬೇಡ.

ಗಂಗಾ—ನನಗವಶ್ಯವಿಲ್ಲ.

ಹಂಸಿ—ಜಂಕೀ, ನೀನು ತಾರೆ!

ತಾರಾ—ಅವಳಿಗೇಕೆ ಪಾಪ! ಅವಶ್ಯವಿದ್ದವರು ತರಲಿ!

ಹಂಸಿ—ನನಗೂ ಬೇಡ. ಹೋಗೋಣ. (ನಾಲ್ಕು ಹಜ್ಜೆ ಹೋಗುವರು.)

ತಾರಾ—ಆದರೆ ಅದರಲ್ಲಿ ಯಾರುಯಾರೊ ಮಹಾಪುರುಷರ ಚಿತ್ರಗಳು ಇರುವವಷ್ಟೆ!

ಹಂಸಿ—ಅಹುದಹುದು. ನಾಳೆ ಆ ಮುದುಕಿ ಬಂದರೆ ಕೊಟ್ಟು ಬಿಡಬೇಕು. (ಹೋಗಿ ಹೆಕ್ಕಿಕೊಳ್ಳುವಳು.)

ತಾರಾ—ಈಗ ಸರಿಯಾಯಿತು. ನಾನು ಹಿಡಿದುಕೊಳ್ಳಲೆ?

ಹಂಸಿ—ಇದೊ, ಕೆಳಕ್ಕೆ ಹಾಕಿಬಿಡಬೇಡ!

ತಾರಾ—ಉಂಟೆ? ನಿನ್ನ ಪ್ರಾಣಪದಕ! ಕೆಳಕ್ಕೆ ಹಾಕಿಯೇನೆ?

ಹಂಸಿ—ಎಂತಹ ಪ್ರಾಣವೊ ಎಂತಹ ಪದಕವೊ!

ತಾರಾ—ಅಹುದಹುದು. ಎಲ್ಲವೂ ಸರಿ ಬರುವುದು.

ಹಂಸಿ—ಏನು ಹುಚ್ಚು ಹುಚ್ಚು ಮಾತಾಡುತ್ತಿಯಪ್ಪಾ! ನನಗೊಂದೂ ತಿಳಿಯದು. ಹೊತ್ತು ಮೀರಿತು. ನಡೆಯಿರಿ.

ತಾರಾ—ಇರಲಿ. ನನ್ನೀ ಹುಚ್ಚುಮಾತು ಶೀಘ್ರದಲ್ಲಿಯೆ ನಿನಗೆ ಅರ್ಥವಾಗದಿರದು!

(ಎಲ್ಲರೂ ಹೋಗುವರು.)



## ೨. ಮದ್ಯ ಮಹಿಮೆ.

[ರಾವ್ ರಣಮಲ್ಲನು ಮದ್ಯಸೇವನೆಯಲ್ಲಿ ಮಗ್ನನಾಗಿರುವನು]

**ರಣಮಲ್ಲ**— ಕಷ್ಟಕಾಲ! ಕಷ್ಟಕಾಲ! ಒಂದು ಗಳಿಗೆಯಾದರೂ ಸ್ವಸ್ಥವಾಗಿ ಕುಳಿತುಕೊಳ್ಳುವುದಕ್ಕಿಲ್ಲ. ಎಲ್ಲಿ ನೋಡಿದರೂ ಮುಸಲ್ಮಾನರ ಹಾವಳಿ—ಎಲೆ ಗಂಗೂ! ಎಲ್ಲಿ?—ಗಂಟಲೆಲ್ಲ ಒಣಗಿ ಹೋಯಿತು! — (ಗಂಗೆಯು ಮದ್ಯಕಲಶವನ್ನು ತಂದುಕೊಡುವಳು.) —ಆ ಹಾಳು ಸೇನಾಪತಿಗಳಿಗೆ ಆಜ್ಞೆಗಳನ್ನು ಹೇಳಿ ಹೇಳಿ ಸಾಕಾಯಿತು. ನಾನೊಂದು ಹೇಳಿದರೆ, ಅವರೊಂದು ಅರ್ಥಮಾಡಿಕೊಳ್ಳುತ್ತಾರೆ; ನನ್ನ ಮನಸ್ಸಿನಲ್ಲಿರುವಂತೆ ಯಾವುದೂ ಸಾಗುವುದಿಲ್ಲ. ಎಲ್ಲಕ್ಕೂ ನಾನೆ ಕಾರಣನಂತೆ! ಹಾಗೆಂದರೇನು? ನನ್ನ ಬಾಹುಬಲವೇನಾದರೂ ಕುಂದಿ ಹೋಗಿದೆಯೋ? ಬುದ್ಧಿಶಕ್ತಿಯಂತೂ ವೃದ್ಧಿಯಾಗುತ್ತ ಬರುತ್ತಿರುವುದು. ಅದರಲ್ಲಿಯೂ ಈ ದ್ರಾವಕವನ್ನೊಂದಿಷ್ಟು ಸೇವಿಸಿದೆನೆಂದರೆ, ನನ್ನ ಬುದ್ಧಿಯು ಹತ್ತಕ್ಕೆ ನೂರು ಪಾಲಾಗುವುದು! ಇನ್ನು ಧೈರ್ಯದ ಮಾತೊ! ಸಾಕ್ಷಾತ್ ಪ್ರಳಯ ಭೈರವನೆ ನನ್ನೊಡನೆ ಯುದ್ಧಕ್ಕೆ ಬರಲಿ! ನಾನೇನಾದರೂ ಅಳುಕಿಯೇನೆ? ಛಿ! ಒಂದೇ ಒಂದು ಕ್ಷಣದಲ್ಲಿ ಆತನನ್ನು ಧೂಳಿ-ಧೂಳೀಪಟ ಮಾಡದಿರೆನು! ಎಲ್ಲಕ್ಕೂ ಮೂಲಾಧಾರವಾವುದು? ಕೇವಲ ಈ ಮದಿರಾದೇವಿ. ಎಲೆ ದೇವೀ! ನಿನ್ನ ಸದ್ಗುಣಗಳನ್ನು ನಾನೆಷ್ಟೆಂದು ಹೊಗಳಿ ಹಾಡಲಿ! ಆ ಮಹಾಶೇಷನು ಎರಡು ಸಾವಿರ ನಾಲಗೆಗಳಿಂದ ಹೊಗಳಿದರೂ, ಅದು ಕೂಡ ಸಮುದ್ರದೊಳಗಿನ ಹನಿಯೆಂತಲೆ ಹೇಳಬೇಕು! ಮನುಷ್ಯನಿಗೆ ಸಂಸಾರಸಾಗರವನ್ನು ದಾಟಬೇಕಾದರೆ, ಸದ್ಗುಣೆಯಾದ ಗೃಹಿಣಿಯೆ ಸಹಕಾರಿಣಿ. ಆ ಅಪಾರವಾದ ಜಲರಾಶಿಯೊಳಗೆ ನಾವೆಯು ಕಂಡಕಡೆಗೆ ಹೋಗದೆ ಸನ್ಮಾರ್ಗದಲ್ಲಿಯೆ ಸಂಚರಿಸುವಂತೆ ಮಾಡುವ ಸುಂಕಾಣಿಯೆ ಆ ಗೃಹಿ

ಣಿಯು. ಅಂತಹ ಸದ್ಗುಣಿಯಾದ ಪ್ರಿಯತಮೆ ಮೋಹಿನಿಯನ್ನು ಕ್ರೂರಾತ್ಮನಾದ ಕಾಲನು ನನ್ನಿಂದ ಅಪಹರಿಸಿಕೊಂಡು ಬಿಟ್ಟನು. ಆ ಮೇಲೆ ನೀನಲ್ಲವೆ ನನಗೆ ಆಶ್ರಯವನ್ನಿತ್ತು, ನನ್ನನ್ನು ಉದ್ಧಾರಮಾಡಿದವಳು? ಎಲೆ ದೇವಿ! ನಿನ್ನನ್ನು ಯಾವ ರೀತಿಯಿಂದ ಸೇವಿಸಿದರೆ ನಿನ್ನ ಋಣವು ಪರಿಹಾರವಾದೀತು? — ಇರಲಿ. ಜಿತೇಂದ್ರಿಯರಾದ ಯೋಗಿಗಳು ಪರಮಾತ್ಮನನ್ನು ತಮ್ಮ ಹೃದಯದೊಳಗೆ ನೆಲಸಿಟ್ಟುಕೊಳ್ಳುವರಂತೆ! ಅಂತೆಯೇ ನಾನು ಕೂಡ ನಿನ್ನನ್ನು ಸದಾಕಾಲವೂ ನನ್ನ ಹೃದಯದೊಳಗೆನೇ ಇಟ್ಟುಕೊಂಡು ಬಿಡುತ್ತೇನೆ! (ಪಾನಮಾಡುವನು.) —ಭಲೆ! ಶಹಬಾಸ್! — (ಅಮಲೇರಿ ಒರಗಿಕೊಳ್ಳುವನು. ಮೋಹಿನೀದೇವಿಯ ಪ್ರೇತವು ಕಾಣಿಸುವುದು.)

ರಣ—ಮೋಹಿನೀ! ಮೋಹಿನೀ! (ಹಿಡಿಯಹೋಗುವನು. ದೂರ ಸರಿಯುವಂತೆ ಪ್ರೇತವು ಸನ್ನೆಮಾಡುವುದು.)

ಮುಟ್ಟಕೂಡದೆ? ಏತಕ್ಕಾಗಿ? ಪ್ರಿಯತಮೆ! (ಪ್ರತಿಸಲವೂ ಪ್ರೇತವು ಸನ್ನೆಮಾಡುವುದು ರಣಮಲ್ಲನು ಅದರ ಅಭಿಪ್ರಾಯವನ್ನು ಅರಿತುಕೊಳ್ಳುವನು.)

ಈಗ ನೀನು ನನ್ನ ಪ್ರಿಯತಮೆಯಲ್ಲವೆ? ಮೋಹಿನಿ! ಏತಕ್ಕಾಗಿ ನಿನ್ನ ಮನಸ್ಸು ಈ ರೀತಿ ಪರಿವರ್ತನವಾಗಿ ಹೋಯಿತು?

ಮನೋಹರೆ! ಇಷ್ಟು ದಿನ ನೀನೆಲ್ಲಿಗೆ ಹೋಗಿದ್ದೆ? ಏತಕ್ಕಾಗಿ ನನಗೀ ದುಃಖವನ್ನುಂಟುಮಾಡಿದೆ? ಇನ್ನಾದರೂ ನನ್ನನ್ನು ಬಿಟ್ಟು ಹೋಗಬೇಡ; ಅನ್ಯಾಯವಾಗಿ ನನ್ನ ಮೇಲೆ ಕಠೋರಳಾಗಬೇಡ! ಏನು? ನನ್ನ ಅವಸ್ಥೆಯನ್ನು ಕಂಡು ಕನಿಕರ ಪಡುವೆಯಾ? ಮತ್ತೇತಕ್ಕೆ ಮುಟ್ಟಕೂಡದೆನ್ನುವೆ?

ಈಗ ನೀನು ನನ್ನವಳಲ್ಲವೆ? ನನ್ನ ಮೋಹಿನಿಯಲ್ಲವೆ? ಪ್ರಿಯತಮೆ! ಏತಕ್ಕಾಗಿ ಇಂತಹ ಅನೃತವನ್ನಾಡಿ ನನಗೆ ಸಂಕಟವನ್ನುಂಟು ಮಾಡುವೆ?

ಏನು? ಈಗ ನೀನು ಮಾನವಿಯಲ್ಲವೆನ್ನುವೆಯಾ? ಮತ್ತಾರು, ದಾನವಿಯೇನು? ಛೀ ಛೀ! ಹಾಗೆಂದಿಗೂ ಅಲ್ಲ. ನೀನು ಸಾಕ್ಷಾತ್

ನನ್ನ ಗೃಹಲಕ್ಷ್ಮಿ! ನಮ್ಮ ಹಂಸಿಯನ್ನು ಹಡೆದವಳು! ನಮ್ಮ ರಾಠೋರವಂಶಕ್ಕೆ ಕುಲದೇವತೆ! ಮನೋಹರೆ! ನಿಂತಿರುವೆಯಲ್ಲ? ಕಾಲೆಷ್ಟು ಬಚ್ಚಿಹೋಯಿತೊ ಏನೊ! ಬಹು ಕ್ಷೀಣವಾಗಿ ಕಾಣಿ ಸುವೆ. ಇದೊ, ಇಲ್ಲಿ ಕುಳಿತುಕೊಂಡು ನನ್ನೊಡನೆ ನಾಲ್ಕು ಮಾತುಗಳನ್ನಾಡು.

ಏನು? ಹಾಗೆ ಮಾಡಲೊಲ್ಲೆಯಾ? ಮೋಹಿನೀ! ಇಷ್ಟು ಸ್ವಲ್ಪ ಕಾಲ ನನ್ನಿಂದ ದೂರವಾಗಿದ್ದ ಮಾತ್ರದಿಂದಲೆ, ನಿನ್ನ ಅನುರಾಗಕ್ಕೆ ಈ ತರದ ಪರಿವರ್ತನ ಬಂದು ಹೋಯಿತೆ! ಛಿ ಛಿ! ಹಾಗೆಂದಿಗೂ ಇರದು. ಕೇವಲ ವಿನೋದಕ್ಕಾಗಿ ಹೀಗೆ ಮಾಡುತ್ತಿರುವೆ. ಮೋಹಿನೀ! ನಾನೇನು ಅಂತಹ ಅಪರಾಧ ಮಾಡಿದ್ದೇನೆ?

ಏನು? ಮದ್ಯಪಾನವೆ? ಅಹುದಹುದು. ನಾನು ಮದ್ಯಪಾಯಿ. ಆದರೆ ಏತಕ್ಕಾಗಿ ಮದ್ಯಪಾನ ಮಾಡುತ್ತೇನೆ, ಗೊತ್ತಿದೆಯೇ? ನಿನ್ನ ವಿಯೋಗದುಃಖವನ್ನು ಶಮನಮಾಡುವುದಕ್ಕೆ! ಇದೊ, ಈ ಕ್ಷಣದಿಂದಲೆ ಇದನ್ನು ತ್ಯಜಿಸಿ ಬಿಟ್ಟೆ! (ಬಳಿಯಿದ್ದ ಮದ್ಯಕಲಶವನ್ನು ದೂರಕ್ಕೆ ತಳ್ಳಿಬಿಡುವನು.)—ಪ್ರಿಯೇ! ಇನ್ನಾದರೂ ನನ್ನನ್ನು ಕ್ಷಮಿಸ ಲಾರೆಯಾ? ನೀನು ಸರ್ವದಾ ನನ್ನ ಬಳಿಯಲ್ಲೆ ಇರು; ಮದ್ಯವೆಂಬ ಹೆಸರನ್ನೆ ಎತ್ತುವುದಿಲ್ಲ! ಮನೋಹರೆ! ಮೋಹಿನೀ! (ಹತ್ತಿರಕ್ಕೆ ಸರಿಯುವನು.)

ಹಾ! ಏನು? ಹೊರಟು ಹೋಗುತ್ತಿಯಾ? ನಿಲ್ಲಲಾರೆಯಾ? ಮೋಹಿನೀ, ಮೋಹಿನೀ! ನೀನು ತುಂಬ ಸರಳಹೃದಯಳು, ನಾನು ಬಲ್ಲೆ. ನನ್ನಂತಹ ಪಾಪಿಯನ್ನು ನೋಡಿಯಲ್ಲ; ಅದೊ, ನಮ್ಮ ಹಂಸಿಯಿರುಳವಷ್ಟೆ? ಅವಳಿಗೋಸ್ಕರವಾದರೂ ಹೋಗಬೇಡ. ಇಲ್ಲೆ ಇರು, ಇಲ್ಲೆ ಇರು.

ಇರಲೊಲ್ಲೆಯಾ? ಇರಲೊಲ್ಲೆಯಾ? ನಾನೀ ಬಾಗಿಲುಗಳನ್ನೆಲ್ಲ ಮುಚ್ಚಿ ಬಿಡುತ್ತೇನೆ. ಮತ್ತೆಲ್ಲಿಗೆ ಹೋಗುವೆ, ನೋಡೋಣ! (ಮುಚ್ಚಹೋಗುವನು. ಪ್ರೇತವು ಅದೃಶ್ಯವಾಗುವುದು.)

ಹಾ! ಹಾ! ಮೋಹಿನೀ! ಮೋಹಿನೀ! ಆಹ್ಹಾ! (ಬಿದ್ದು ಬಿಡುವನು. ಅಲ್ಲೇ ನಿದ್ದೆ ಹತ್ತುವುದು. ಕೊಂಚ ಹೊತ್ತಿನಲ್ಲಿ ಅರಸು ಮಕ್ಕಳು ಅಲ್ಲಿಗೆ ಬರುವರು.)

ಜೋದ—ರಾಜು! ಸದ್ದು ಮಾಡಬೇಡ. ಅಪ್ಪಾಜಿಯವರಿಗೆ ನಿದ್ದೆ ಬಂದಿದೆ.

ರಾಜಮಾನ— ಆಗಲಿ.—ಅಣ್ಣಯ್ಯ! ಇದೊ ಇಲ್ಲಿ ನೋಡು.

ಜೋದ—ಏನು? ಮದ್ಯವೆ? ಇದೊಂದು ಪುರಾತನ ಕರ್ಮಫಲ! ಈಗೀಗಲಂತೂ ಮಿತಿ ಮೀರಿ ಹೋಗಿದೆ.

ರಾಜು—ಒಂದು ವೇಳೆ ಅಮ್ಮ ಸಿರುತಿದ್ದರೆ!

ಜೋದ—ಆ ಮಾತು ಈಗೇನೂ ಪ್ರಯೋಜನಕ್ಕೆ ಬಾರದು.

ರಣ— (ಕನವರಿಸುವನು.)—ಮೋಹಿನೀ! ಮೋಹಿನೀ!

ರಾಜು—ಅಪ್ಪಾಜಿ!

ರಣ—(ಕನವರಿಕೆ) —ಇಲ್ಲ ಇಲ್ಲ; ಇನ್ನು ಸರ್ವಥಾ ಮಾಡುವುದಿಲ್ಲ!

ಜೋದ — ಅಪ್ಪಾಜಿ! ಏನಿದು ಕನವರಿಸುತ್ತಿರುವಿರಿ?

ರಣ—(ಎಚ್ಚೆತ್ತು.)—ಮೋಹಿನಿ!—ಮೋಹಿನಿ ಇಲ್ಲಿಲ್ಲವೆ?

ರಾಜು— ಯಾವ ಮೋಹಿನಿಯನ್ನು ಕೂಗುತ್ತಿರುವಿರಿ?

ರಣ—ಯಾಕೆ? ನಿಮ್ಮಮ್ಮ ಎಲ್ಲಿ ಹೋದಳು? ಈಗ ತಾನೆ ಇಲ್ಲಿದ್ದಳಷ್ಟೆ?

ಜೋದ—ಇಲ್ಲೆಲ್ಲಿ? ಆವಳಂದೆ ಹೊರಟು ಹೋಗಿಲ್ಲವೆ?

ರಣ—ಸುಳ್ಳು ಮಾತು! ಈಗ ತಾನೆ ಇದೇ ಕೋಣೆಯಲ್ಲಿ ನಾನಾಕೆ ಯೊಡನೆ ಮಾತನಾಡಿದೆ!

ರಾಜು—ಕನಸಾಗಿರಬೇಕು.

ರಣ—ಅರಮನೆಯೊಳಗೆ ಎಲ್ಲಾದರೂ ಇದ್ದಾಳೆಯೊ ಏನೊ!

ಜೋದ—ಹೇಗಿರುವುದು? ಎಲ್ಲಿಯೂ ಇಲ್ಲ. ಕನಸಿನಲ್ಲಿ ಕಂಡಿರಾಗಿರ ಬೇಕು.

ರಣ—ಖಂಡಿತವಾಗಿಯೂ ಕನಸೆನ್ನುವೆಯಾ?

ಜೋದ—ಅಲ್ಲದೆ ಮತ್ತೇನು?

ರಣ—ಸಂದೇಹ ಕಾಣುತ್ತದೆ. ರಾಜು, ನೋಡಿಕೊಂಡು ಬಾ! (ರಾಜು ಹೋಗುವನು.) ಜೋದಾ! ನೀನು ಹೋದ ಕೆಲಸವೇನಾಯಿತು?

ಜೋದ—ಲೋಡಿಯ ಕಡೆಯಿಂದ ಇಸ್ಮಾಯಿಲ್ ಖಾನನು ಬಂದಿದ್ದನು. ಸೈನ್ಯವೇನೂ ದೊಡ್ಡದಿರಲಿಲ್ಲ; ಎರಡು ಸಾವಿರ.

ರಣ—ನಿನ್ನದು?

ಜೋದ—ಮುನ್ನೂರು! ಆದರೆ ನಮಗೆ ಸಮರಕ್ಕೆ ಆಸ್ಪದವಿರಲಿಲ್ಲ. ನಾನು ಹೊರಟ ವರ್ತಮಾನ ಕೇಳಿದ ಕೂಡಲೆ ಆತನು ಅಜಮೀರಿನ ಮಾರ್ಗ ಹಿಡಿದುಬಿಟ್ಟನು.

ರಣ—ಏನಾದರೂ ನಮ್ಮ ಮಾರ್ವಾಡಕ್ಕೆ ನಷ್ಟವಾಗಲಿಲ್ಲವಷ್ಟೆ?

ಜೋದ—ಏನೋ ಹತ್ತಿಪ್ಪತ್ತು ಮಂದಿ ರೈತರನ್ನು ಸುಲಿಗೆ ಮಾಡಿದರಂತೆ. ಪ್ರಾಣಹಾನಿಯೇನೂ ಆಗಲಿಲ್ಲ.

ರಣ—ಎಲ್ಲಿ ಹೋದರೂ ಈ ಯವನರು ರಣಹೇಡಿಗಳಂತೆ ಮಾಡುತ್ತಿರುವರು. ರಾಜು! ನೋಡಿದೆಯಾ? (ರಾಜು ಮತ್ತು ತಾರೆ ಬರುವರು.)

ರಾಜು—ನಾನು ಹೇಳಲಿಲ್ಲವೆ? ಬರಿಯ ಕನಸು!

ರಣ—ಆಗಲಿ. ತಾರೆ! ಏನದು?

ತಾರಾ—ವಿಶೇಷವೇನೂ ಇಲ್ಲ. ಮಹಾರಾಣರ ಚಿತ್ತಸ್ವಾಸ್ಥ್ಯವನ್ನು ನೋಡಿಕೊಂಡು ಹೋಗೋಣವೆಂದು ಬಂದೆನು!

ರಣ—ಹಂಸಿ ಚೆನ್ನಾಗಿರುವಳಲ್ಲವೆ?

ಜೋದ—ತಾರೆ! ಹಂಸಿ ಚೆನ್ನಾಗಿಲ್ಲವೆ?

ತಾರಾ—ಅವಳಿಗೇನಾಗಿದೆ? ಚೆನ್ನಾಗಿರುವಳು.

ಜೋಧ—ಏನೊ ಮುಖ ಬಾಡಿದಂತಿತ್ತು?

ತಾರಾ—ಬಿಸಿಲಿಂದಿರಬಹುದು.

ರಣ—ಇರಬಹುದು. ಈಗ ನೀನೇನು ಬಂದೆ? ಏನೊ ವಿಶೇಷವಿರುವಂತೆ ಕಾಣುತ್ತದೆ!

ತಾರಾ—ಹಾಗೇನೂ ಇಲ್ಲ!

ರಣ—ಸಂಕೋಚವೇಕೆ? ಹೇಳಿಬಿಡಬಾರದೇ?

ತಾರಾ—ಮತ್ತೇನೂ ಅಲ್ಲ, ಹಂಸಿಗೆ ವಿವಾಹವಾಗಬೇಡವೆ?

ರಾಜು—ಇಷ್ಟು ಅವಸರವೇಕೆ? ಆಕೆ ಇನ್ನೂ ಚಿಕ್ಕ ಹುಡುಗಿ ತಾನೆ!

ತಾರಾ—ಹುಡುಗಿಯೆಂದರೇನು? ಹದಿನಾರು ವರುಷ ತುಂಬಿತು. ಮೋಹಿನೀದೇವಿಯು ಇರುತಿದ್ದರೆ ಹಂಸಿಗೆ ಇಷ್ಟು ಹೊತ್ತಿಗೆ ಮಕ್ಕಳಾಗುತಿದ್ದುವೊ ಏನೊ!

ರಣ—ಆದರೆ, ಆಕೆಯ ಅಭಿಪ್ರಾಯವೇನು?

ತಾರಾ—ಆಕೆಯು ಬಾಯಿಬಿಚ್ಚಿ ಹೇಳುತ್ತಾಳೇನು?

ರಣ—ನೀನೇನು ಹೇಳುವೆ?

ತಾರಾ—ನಾನೇನು ಹೇಳಲಿ? ಎಲ್ಲವೂ ತಮ್ಮ ಚಿತ್ತ.

ರಣ—ತಾರೆ! ಅದೆಲ್ಲ ಹಾಗಿರಲಿ! ಆಕೆಯ ಹೃದಯವನ್ನು ತಿಳಿದು ನನಗೆ ಹೇಳು.

ತಾರಾ—ಅದಕ್ಕೇಕೆ ಸಾವಕಾಶ? ಬೇಗನೆ ತಕ್ಕ ವರನನ್ನು ಗೊತ್ತು ಹಚ್ಚಿರಿ!

ರಣ—ಜೋಧಾ! ಏನು ಹೇಳುವೆ?

ರಾಜು—ವರನಾರು?

ಜೋಧ—ಅದೇ ಯೋಚನೆ.

ರಣ—ಸಂಗ್ರಾಮನಾಗದೆ?

ರಾಜು—ಅಂಬರಕ್ಕಾಗದೆ?

ತಾರಾ—ಅದಕ್ಕಿಷ್ಟು ಯೋಚನೆಯೇಕೆ? ಅನಾದಿಯಿಂದಲೂ ರಾಠೋರ ವಂಶಕ್ಕೂ ಸಿಸೋದಿಯಾ ವಂಶಕ್ಕೂ ನಂಟು ನಡೆದು ಬಂದಿದೆ.

ರಣ—ಅದೀಗ ಸರಿ.

ಜೋದ—ಆದರೆ, ಅವರಾಗಿ— — —

ತಾರಾ—ಅವರಾಗಿಯೆಂದರೇನು? ಇದೆಲ್ಲಿಯ ಪದ್ಧತಿ?

ಜೋದ—ಮತ್ತೆ ಹೇಗೆ?

ತಾರಾ—ಶ್ರೀಫಲ ಕಳುಹಿಸಿದರಾಯಿತು!

ರಣ—ಎಲ್ಲಿಯಾದರೂ ತಿರಸ್ಕರಿಸಿದರೆಂದರೆ?

ತಾರಾ—ಇದೆಂತಹ ಮಾತು ರಾಣಾಜಿ! ತಾನಾಗಿ ಒಲಿದು ಬಂದ ಲಕ್ಷ್ಮಿಯನ್ನು ತಿರಸ್ಕರಿಸುವರೆಲ್ಲಿಯಾದರೂ ಇದ್ದಾರೇನು?

ರಣ—ಆಗಲಿ. ಜೋದಾ! ನಾಳಿನ ದಿನ ಮಂತ್ರಿಗಳೆಲ್ಲರೂ ಬರುವಂತೆ ಏರ್ಪಾಡು ಮಾಡು. ಶ್ರೀಫಲ ಕಳುಹೋಣ.

ಜೋದ—ಆಗಲಿ. (ರಾಜಮಾನನನ್ನು ಕರೆದುಕೊಂಡು ತಾನು ಹೋಗುವನು.)

ರಣ—ತಾರೆ! ಹಂಸಿ ಎಲ್ಲಿರುವಳು?

ತಾರಾ—ಜಂಕಿಯೊಡನೆ ದುರ್ಗಾಲಯಕ್ಕೆ ಹೋಗಿದ್ದಾಳೆ.

ರಣ—ಬಂದೊಡನೆ ನನಗೆ ತಿಳಿಸು.

ತಾರಾ—ಆಜ್ಞೆ. (ಹೋಗುವಳು.)

ರಣ—(ಅತ್ತಿತ್ತ ನೋಡಿ)—ಗಂಗೂ! ಎಲ್ಲಿ? ಏನು ಮಾಡುತ್ತಿರುವೆ?— (ಗಂಗೆಯು ಮದ್ಯಚಷಕವನ್ನು ತಂದುಕೊಡುವಳು.)— ಶಹಬಾಸ್! ಮೋಹಿನಿಯು ಇಲ್ಲೆಲ್ಲಿಯೂ ಇಲ್ಲವಲ್ಲ? (ಕೊಂಚ ಕುಡಿದು.)-ಈಗ- ವೈದ್ಯಭಾಗವನ್ನು ಪರಿಶೀಲಿಸಿದರೆ, ವೈದ್ಯಶಿಖಾಮಣಿ ಲೋಲಂಬ ರಾಜನೇನು ಸಾಮಾನ್ಯನೆ? ಆತನ ಮತವೇನು? ತನ್ನ ಹೆಂಡತಿಗೇನು ಹೇಳುತ್ತಾನೆ?

**ಅಯಿ ರತ್ನಕಳೇ ಕುರು ಮಾ ಕಲಹಂ ।**
**ಕಲಹಂಸ ಸಮಾನಗತೇ ॥**
**ಶೃಣು ಮದ್ವಚನಂ ಮದಿರಾ ।**
**ಮದಿರಾಕ್ಷಿ ಶುಚಂ ಶಮಯೇತ್ ॥**

ಕಲಹಂಸಗಮನೆ! ರತ್ನಕಳೆ! ಏತಕ್ಕಾಗಿ ವೃಥಾ ಕಲಹವಾಡು ತ್ತಿರುವೆ? ಶೋಕವನ್ನು ನಿವಾರಣಮಾಡಲು ಮದ್ಯವಲ್ಲದೆ ಬೇರೊಂದಿರದು! ಶಹಬಾಸ್! ಲೋಲಂಬ ರಾಜ! ನಿಷ್ಪಕ್ಷಪಾತಿ ಯೆಂದರೆ ನೀನೇ ಸರಿ! ಸರ್ವರೂ ನನ್ನನ್ನು, ಇದಿರಿನಲ್ಲಿಲ್ಲವಾದರೂ ಹಿಂದಿನಿಂದಲಾದರೂ, ಮದ್ಯಪಾಯಿಯೆಂದು ನಿಂದಿಸುತ್ತಿರುವರು! ನೀನಾದರೂ ಹಿಂದಿನಿಂದ ಕೂಡ ನನ್ನನ್ನು ಸಮರ್ಥಿಸುತ್ತಿರುವೆ! ಒಂದು ವೇಳೆ ನೀನು ನನ್ನ ಸಮಕ್ಷಮದಲ್ಲಿರುತಿದ್ದರೆ, ನಿನ್ನಂತಹ ಆಪ್ತರೆ ನನಗೆ ಬೇರೆ ಇಲ್ಲವೆಂದಾಗುತಿತ್ತು! ಮೋಹಿನಿಯಂತಹ ರತ್ನವನ್ನು ಕಳೆದುಕೊಂಡ ವಿಧುರನ ಶೋಕವು ಶಮನವಾಗಬೇಕಾ ದರೆ, ಈ ಮದ್ಯಸೇವನೆಯಲ್ಲದೆ ಬೇರೊಂದಿರಲಾರದು! ಭಲೆ! ವೈದ್ಯ ರಾಜಾ! ನಿನ್ನಾ ಸೂಕ್ತಿಯನ್ನು ಸರ್ವದಾ ಸ್ಮರಣೆಯಲ್ಲಿಟ್ಟುಕೊಂಡಿ ರುತ್ತೇನೆ!-- (ಪಾನಮಾಡುತ್ತ)--ಶಹಭಾಸ್! ಆನಂದ! ಆನಂದ!

## ೩. ಪ್ರ ತಿ ಜ್ಞೆ.

[ಮೇವಾರದ ರಾಜಗೃಹದಲ್ಲಿ ಪ್ರಧಾನರಾದ ಜಯಮಲ್ಲ, ಚೇಲಾರಾಮ, ರೂಪಸಿಂಗ ಮೊದಲಾದವರು ಕುಳಿತಿರುವರು.]

ಜಯ—ಏನು ಯಾದವಜೀ! ನಗುತ್ತ ಬರುತ್ತಿರುವಿರಲ್ಲ?

ಚೇಲಾ—ಸುಮ್ಮನೆ ನಗುತ್ತಾರೆಯೆ? ಏನೊ ವಿಶೇಷವಿರಬೇಕು.

ರೂಪ—ಹಾರಾವತಿಯಿಂದೇನಾದರೂ ಶುಭವರ್ತಮಾನ ಬಂದಿದೆಯೇನೊ?

ಯಾದವ—ನೋಡೋಣ, ನೀವೆ ಊಹಿಸಿರಿ.

ಜಯ—ರಹಿಮತ್ ಖಾನನು ದೆಹಲಿಗೆ ಓಡಿಹೋಗಿ ಬಿಟ್ಟನೇನೊ!

ರೂಪ—ಅಲ್ಲ. ನಾನು ಹೇಳುತ್ತೇನೆ; ಗಯೆಗೆ ಬಂದಿದ್ದ ಮಹಮ್ಮದ ಮಿರಾನು ಸೆರೆಸಿಕ್ಕಿರಬೇಕು.

ಚೇಲಾ—ಇಲ್ಲ. ನಮಗೊಂದು ನೂತನ ಸಮರವು ಸಿದ್ಧವಾಗಿರಬೇಕು.

ಯಾದವ—ಹಾಗಾದರೆ ನಾನು ಹೇಳುತ್ತೇನೆ; ರಾಣರು ಬರಲಿ; ಈಗಲೆ ಗೊತ್ತಾಗುತ್ತದೆ.

ಚೇಲಾ—ಈಗಲೆ ಹೇಳಿ ಬಿಡಬಾರದೆ?

ಯಾದವ—ಶ್ರೀಫಲ ಬಂದಿರುವುದು.

ರೂಪ—ಏನು ಶ್ರೀಫಲ? ಎಲ್ಲಿಂದ?

ಯಾದವ—ಮಾರ್ವಾಡದ ರಾಠೋಡರಿಂದ—ವಿವಾಹಕ್ಕೆ.

[ಅಷ್ಟರಲ್ಲಿ ಲಾಖಾರಾಣನೂ ಯುವರಾಜ ಚಂಡಸಿಂಗನೂ ಪ್ರವೇಶಿಸುವರು. ಪ್ರಧಾನರು ತಮ್ಮ ತಮ್ಮೊಳಗೆನೇ ಮೆಲ್ಲಗೆ ಮಾತನಾಡಿಕೊಳ್ಳುತ್ತಿರುವರು.]

ಲಾಖಾ—ಚೇಲಾರಾಮ! ಏನದು ಅಂತರಂಗ?

ಚೇಲಾ—ಅಂತಹುದೇನೂ ಇಲ್ಲ.

ಚಂಡ—ಸಂಕೋಚವೇಕೆ? ಬರಲಿ!

ಚೇಲಾ—ಆದರೆ ಆ ಅಂತರಂಗವು ಬಹಿರಂಗಕ್ಕೆ ಒಂದರೆ ಯುವರಾಜ ಚಂಡಸಿಂಗರಿಗೆ ಕೊಂಚ ಮನೋಭಂಗವಾದೀತೆಂಬ ಅಂಜಿಕೆ ಯಿದೆ.

ಚಂಡ—ಎಂದೆಂದಿಗೂ ಸಂದೇಹ ಬೇಡ. ಆಡಿಬಿಡಿ.

ಚೇಲಾ—ಆದರೆ 'ಕಂಡುದಾಡಿದರೆ ಕೆಂಡದಂತಹ ಕೋಪ' ಎನ್ನುವರಲ್ಲವೆ?

ಲಾಖಾ—ಅಂತಹ ಸಮಾಚಾರವೇನಿರ ಬಹುದು? ಚಂಡ! ಏನಾದರೂ ಅಕೃತ್ಯ ಮಾಡಿರುವೆಯೇನು?

ಚಂಡ—ಅಪ್ಪಾಜಿ! ಹೇಗೆ ಖಂಡಿತವಾಗಿಯೂ ಇಲ್ಲವೆಂದು ಹೇಳಿ ಬಿಡಲಿ? ಎಲ್ಲಾದರೂ ಅರಿವಿಲ್ಲದೆ ಅಕೃತ್ಯ ನಡೆದಿರಬಹುದು.

ಚೇಲಾ—ಚಂಡಾಜಿ! ಅರಿವಿಲ್ಲದೆ ಎನ್ನುವಿರಷ್ಟೆ! ಇಷ್ಟು ಹೊತ್ತಿಗೆ ರಾಜಸ್ಥಾನವೆ ಅರಿತಿರಬಹುದು!

ಚಂಡ—ಹಾಗಾದರೆ ಇನ್ನು ವಿಳಂಬವೇಕೆ? ನೀವೆಲ್ಲರೂ ಶಾಸನ ಕರ್ತೃಗಳಷ್ಟೆ? ಈ ಕ್ಷಣವೆ ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸೋಣಾಗಲಿ!

ಯಾದವ—ಆದರೆ ಶಿಕ್ಷೆ ಬಹು ಕಠಿಣತರವಿರ ಬಹುದೇನೊ?

ಚಂಡ—ರಜಪೂತನು ಯಾವುದಕ್ಕೂ ಅಳುಕುವ ಹಾಗಿಲ್ಲ.

ರೂಪ—ರಜಪೂತನಿಗೆ ಕೂಡ ಸಮ್ಮತವಲ್ಲದ ಶಿಕ್ಷೆಯಾದರೆ?

ಲಾಖಾ—ಅಂತಹ ಶಿಕ್ಷೆ ಕೂಡ ಒಂದಿರುವುದೆ?

ಯಾದವ- ಇರಬಹುದು! ಅತ್ಯಂತ ಪ್ರಿಯವಾದ ವಸ್ತುವು ಪ್ರಾಪ್ತವಾಗದೆ ಹೋದರೆ ಅದಕ್ಕಿಂತಲೂ ಕಠಿಣತರವಾದ ಶಿಕ್ಷೆಯು ಬೇರೊಂದಿರದು.

ಜಯ—ಪ್ರಾಣವೇನೊ?

ಯಾದವ—ರಜಪೂತನಿಗೆ ಪ್ರಾಣವೆಂಬುದು ತೃಣ ಸಮಾನವಲ್ಲವೆ?

ರೂಪ—ಇನ್ನಾವುದು ಅದಕ್ಕಿಂತಲೂ ಪ್ರಿಯವಾದುದು? ಮಾನವಾಗಿರಬಹುದು.

ಚಂಡ—ಮಾನವೊ ಅಭಿಮಾನವೊ, ಯಾವದೂ ಇರಲಿ! ನಾನಾವುದಕ್ಕೂ ಸಿದ್ಧನಾಗಿದ್ದೇನೆ. ಈ ಕ್ಷಣವೆ ವಿಚಾರಣೆಯಾಗಲಿ.

ಚೇಲಾ—ಚಂಡಾಜಿ! ಕೊಂಚ ಸಮಾಧಾನ ಮಾಡಿಕೊಳ್ಳಿರಿ. ನಿಮ್ಮ ಈ ವೇಷಕ್ಕೆ ಆವೇಶ ಸಲ್ಲುವುದೇನು?

ಲಾಖಾ—ಚೇಲಾರಾಮ! ಇದೇನೊ ವಿನೋದದಂತೆ ಕಾಣಿಸುವುದಷ್ಟೆ?

ಚೇಲಾ—ಅಹುದಹುದು. ರಾಣಾಜಿ! ನಮ್ಮ ರಜಪೂತರಿಗೆ ಅದು ವಿನೋದವೆ!

ಲಾಖಾ—ಹಾಗಾದರೆ ಚಂಡ ಮಾಡಿದ ಅಪರಾಧವೇನು?

ಚೇಲಾ—ರಾಣಾಜಿ! ನಮ್ಮ ವಿಜಯಸೇನ, ಕುಮಾರಸಿಂಹ, ಹರಪಾಲ ಮೊದಲಾದವರು ಚಂಡಾಜಿಯನ್ನು ದೂರುತ್ತಿರುವರು

ಲಾಖಾ—ಏತಕ್ಕೋಸ್ಕರ?

ಚೇಲಾ—ಮೊನ್ನೆ 'ಚಂಡಸಿಂಗ' ಎಂಬ ಹೆಸರನ್ನು ಕೇಳಿದೊಡನೆ ಮಹಮ್ಮದ ವಿಾರನು ಗಯಾಕ್ಷೇತ್ರದಿಂದ ಓಡಿಹೋಗಿ ಬಿಟ್ಟನಂತೆ!

ಯಾದವ—ಅದರಿಂದೇನು?

ಚೇಲಾ—ಆಗುವುದೇನು? ತಮಗೆ ಸಂಗ್ರಾಮದ ಸಂತೋಷವು ತಪ್ಪಿಹೋಯಿತಂತೆ!

ಚಂಡ—ಅಷ್ಟು ತಾನೆ?

ಚೇಲಾ—ಅದೊಂದು ದೊಡ್ಡ ಅಪರಾಧವಲ್ಲವೇನು?

ಲಾಖಾ—ಅದಕ್ಕೀಗಲೇನು ಮಾಡಬೇಕೆನ್ನುವೆ?

ಚೇಲಾ—ಮಾಡುವುದೇನು? ನಮ್ಮ ರಜಪೂತರಿಗೆ ಆಗಾಗ ಉತ್ಸಾಹವು ದೊರೆಯುವಂತೆ ಮಾಡಬೇಕು.

ಲಾಖಾ—ನೀನೇ ಒಂದು ಉಪಾಯವನ್ನು ಹೇಳಿಬಿಡು.

ಚೇಲಾ—ಯಾದವ ಸೇನರು, ರೂಪ ಸಿಂಗರು, ಜಯಮಲ್ಲರು—ಇವರೆಲ್ಲರೂ ಪ್ರತಿಭಾಶಾಲಿಗಳು. ಅವರ ಅಭಿಪ್ರಾಯವನ್ನು ಅನುಸರಿಸುವುದು ಸರಿಯೆಂದು ಕಾಣುತ್ತಿದೆ.

ಯಾದವ—ರಾಣಾಜಿ! ನಮ್ಮ ಚೇಲಾರಾಮನು ಆಡಿದುದೆಲ್ಲವೂ ಸರಿಯೆಂದು ಕಾಣುತ್ತಿದೆ. ಇಂತಹ ಅಲ್ಪರು ರಣಹೇಡಿಗಳು ಶತ್ರುಗಳು ಬಂದರೆ, ಸ್ವಂತವಾಗಿ ರಾಣಾಜಿಯವರಾಗಲಿ ಯುವ

ರಾಜರಾಗಲಿ ಅವರ ಮೇಲೆ ದಂಡೆತ್ತಿ ಹೋಗುವುದು ಅನಾವಶ್ಯಕವಲ್ಲವೆ?

ಜಯ—ಯಾವನಾದರೊಬ್ಬ ದಳವಾಯಿ ಹೋದರೆ ತೀರಿತು.

ರೂಪ—ರಾಣಾಜಿಯವರು ಆ ಕಾಲವನ್ನು ಇತರ ವ್ಯವಸ್ಥೆಗಳಲ್ಲಿ ವಿನಿಯೋಗಿಸ ಬಹುದು.

ಚಂಡ—ಅಪ್ಪಾಜಿ! ಯಾದವಸೇನರ ಮತವು ಬಹು ಪಕ್ಷ ಅನುಸರಣೀಯವು. ಸಾಮಾನ್ಯ ದಳವಾಯಿ ಹೋಗುವುದೆಂದರೆ ಯೋಧರಿಗೆ ಅಷ್ಟೊಂದು ಉತ್ಸಾಹವು ಹುಟ್ಟುವುದಿಲ್ಲ. ಸ್ವತಃ ರಾಣಾಜಿಯವರೆ ಹೊರಟರೆಂದರೆ ಯೋಧರ ವೀರಶ್ರೀಯು ಹೆಚ್ಚುವುದು.

ಯಾದವ—ಅದು ನಿಜ. ಆದರೆ ಶತ್ರುಗಳ ಬಲಾಬಲ ವಿಚಾರ ನೋಡಿಕೊಂಡು ಯುದ್ಧ ಸನ್ನಾಹ ಮಾಡುವುದು ವಿಹಿತ.

ಲಾಖಾ ಅದು ಸರಿ.

ಚಂಡ—ಅದಾಗ ಬಹುದು.

ಯಾದವ—ರಾಣಾಜಿ! ಮಾರ್ವಾಡದಿಂದ ಸಚಿವಶಿರೋಮಣಿ ರಾಮಸಿಂಗಜಿಯರು ಬಂದು ಕಾದಿರುವರು.

ಲಾಖಾ—ಏನು ನಿಮಿತ್ತವೊ? ಆಗಲಿ, ಬರಲಿ.

(ಚಂಡನೂ ಯಾದವನೂ ರಾಮಸಿಂಗರನ್ನೂ ಪುರೋಹಿತರನ್ನೂ ಕರೆದುಕೊಂಡು ಬರುವರು. ಎಲ್ಲರೂ 'ರಾಮರಾಮ' ಹೇಳುವರು.)

ಪುರೋಹಿತ—ಸಿಸೋದಿಯನು ವಿಜಯಿಯಾಗಲಿ!

ರಾಮ—ರಾಣಾಜೆ! ಈ ಆಸ್ಥಾನಕ್ಕೆ ಬಂದೊಡನೆಯೆ ನನಗೇಕೊ ಒಂದು ವಿಧವಾದ ಪೂಜ್ಯ ಬುದ್ಧಿಯುಂಟಾಗದೆ; ರೋಮಾಂಚನವುಂಟಾಗುತ್ತಿದೆ.

ಲಾಖಾ—ಏತಕ್ಕಾಗಿ ಹಾಗಾಗಬೇಕು?

ರಾಮ—ಏತಕ್ಕೆನ್ನಲಿ! ರಾಣಾಜಿ! ತಾವು ಧನ್ಯರು. ಇಲ್ಲಿನ ವ್ಯವಸ್ಥೆಗಳೊ, ಆದರ ಉಪಚಾರಗಳೊ—ಇವೆಲ್ಲವನ್ನೂ ನೋಡಿದರೆ ಪರಮಾನಂದವಾಗುತ್ತಿದೆ.

ಯಾದವ – ಹಾಗೇಕೆನ್ನುವಿರಿ? ಲೋಕರೂಢಿಯೊಳಗೊಂದು ವಿಶೇಷವೇನಿದೆ?

ರಾಮು – ಬರಿಯ ಲೋಕರೂಢಿಯಲ್ಲ. ನೀವೆಲ್ಲರೂ ಮೇವಾರವನ್ನಾಳುವಂತಹರು; ಎಲ್ಲರೂ ತುಂಬ ವಿಚಕ್ಷಣರು. ಒಬ್ಬರ ಮನಸ್ಸನ್ನೊಬ್ಬರು ಬಲು ಬೇಗನೆ ತಿಳಿದುಕೊಂಡು ಬಿಡುವಿರಿ. ಎಲ್ಲರೂ ಏಕಮತ್ಯದಿಂದ ವರ್ತಿಸುತ್ತಲಿರುವಿರಿ. ರಾಣಾಜಿ! ಇಂತಹ ಸ್ವಾಮಿನಿಷ್ಠ ಸೇವಕರಿರುವ ತಾವು ಧನ್ಯರೆಂದರೆ ಅದೇನು ಹೆಚ್ಚಿನ ಮಾತೆ?

ಚೇಲಾ – ಅಯ್ಯಾ, ಸಚಿವಶಿರೋಮಣಿ! 'ಜೈಸಾಭಾವ್ ವಯಿಸಾ ಪಾವ್'—ಎಂದಿರುವದು. ತಮಗೆ ಹಾಗೆ ಕಾಣಿಸುವುದಕ್ಕೆ ತಮ್ಮ ಮನಸ್ಸೆ ಕಾರಣವಲ್ಲದೆ, ನಮ್ಮ ಕೃತ್ಯಗಳಲ್ಲ. ತಾವು ಶುದ್ಧವಾದ ಅಂತಃಕರಣವುಳ್ಳವರಾದುದರಿಂದ ತಮಗೀರೀತಿ ಕಾಣಿಸುವುದು ಸಹಜ.

ರಾಮು – ಚೇಲಾಜಿ! ನಾನು ಕೂಡ ಹಲವು ರಾಜಾಸ್ಥಾನಗಳನ್ನು ಕಂಡಿದ್ದೇನೆ. ಈ ತೆರನಾದ ಉತ್ಸಾಹವು ಎಲ್ಲಿಯೂ ಇಲ್ಲ. ಎಲ್ಲರೂ ಮುಖಜೋಲು ಹಾಕಿಕೊಂಡು ಕಪಟ ಗಾಂಭೀರ್ಯವನ್ನು ತೋರ್ಪಡಿಸಿಕೊಂಡಿರುವರು. ಇಲ್ಲಿ ಯಾದರೊ ರಾಣಾಜಿಯವರಿಗೂ ಅವರ ಕಿಂಕರರಿಗೂ ಇರುವ ಪರಸ್ಪರ ವಿಶ್ವಾಸವು ಸಂಪೂರ್ಣವಾಗಿಯೂ ವ್ಯಕ್ತವಾಗುತ್ತಿದೆ.

ರೂಪ— ಮಹಾರಾಣರು ಕೊಂಚ ಮೃದುವಾಗಿರುವುದರಿಂದ ಹೀಗಾಗಿರಬಹುದು.

ರಾಮು – ಸಾಕ್ಷಾತ್ ದಿನಮಣಿ—ಸೂರ್ಯಾನ್ವಯತಿಲಕ — ಸಿಸೋದಿಯಾ ರಾಣನಲ್ಲಿ ಮಾರ್ದವವು ಸಹಜವಾಗಿರದೆ ಹೋದರೆ 'ಸಿಸೋದಿಯಾ' ಎಂಬ ಹೆಸರಿಗೆ ಇಷ್ಟರ ಮಟ್ಟಿನ ಪೂಜ್ಯತ್ವವು ಬರುತಿತ್ತೆ?

ಯಾದವ – ರಾಮುಸಿಂಗಜಿ! ತಮ್ಮಂತಹ ರಾಜಕಾರ್ಯಧುರಂಧರರಿಂದಲ್ಲವೆ ಸಿಸೋದಿಯಾ ರಾಣರು ಕೀರ್ತಿವಂತರಾಗುವರು?

ಆದರೆ ನಮ್ಮ ಮಹಾರಾಣರು ಇಂತಹ ಸ್ತೋತ್ರಗಳಿಗೆ ಅರ್ಹ ರಲ್ಲ. ಆದುದರಿಂದ ಅವರನ್ನು ಬರಿದೆ ಏತಕ್ಕಾಗಿ ಜೀವನ್ಮೃತ ಮಾಡುತ್ತಲಿರುವಿರಿ?

ರಾಮ – ಹಾಗಲ್ಲ. ನನ್ನ ಮನವುಕ್ಕಿಬಂದು ಹಾಗಾಡಿದೆನಲ್ಲದೆ ಮತ್ತೆ ಬೇರೆಯಿಲ್ಲ. ಮಹಾರಾಣರು ನೊಂದುಕೊಳ್ಳಬಾರದು. ಕ್ಷಮಿಸೋಣಾಗಲಿ.

ಲಾಖಾ – ರಾಮಜಿ! ತಮ್ಮಂತಹರು ಆಡುವ ಮಾತುಗಳು ನಮಗೆ ಆಜ್ಞೆ ಇಲ್ಲವೆ ಆಶೀರ್ವಾದ ರೂಪಗಳಲ್ಲದೆ ಬೇರೊಂದಿರದು. ತಮ್ಮ ಈ ಮಾತುಗಳಿಂದ ನನ್ನ ಕರ್ತವ್ಯವೇನೆಂಬುದು ನನಗೆ ತಿಳಿದಂತಾ ಯಿತು.

ಯಾದವ ಈಗ – ಸಚಿವ ಶಿರೋಮಣಿ! ತಮ್ಮ ಆಗಮನದಿಂದ ನಮ್ಮ ರಾಣರ ಆಸ್ಥಾನವು ಪವಿತ್ರವಾದಂತಾಯಿತು. ನಮ್ಮ ಮಾರ್ವಾಡದ ಬಂಧುಗಳ ಸಮಾಚಾರವನ್ನು ತಿಳಿದುಕೊಳ್ಳ ಬೇಕೆಂದು ರಾಣಾಜಿಯವರು ತುಂಬ ಕುತೂಹಲ ಪಡುತಲಿದ್ದಾರೆ.

ರಾಮ – ಎಲ್ಲರೂ ಸುಖವಾಗಿದ್ದಾರೆ.

ಲಾಖಾ – ರಾಠೋರ ರಾಣರು ರಾಣೀ ಮೋಹಿನೀದೇವಿಯ ವಿಯೋಗ ದಿಂದ ತುಂಬ ಕೊರಗುತ್ತಿರುವರೆಂದು ಕೇಳಿದ್ದೆವು.

ರಾಮ – ಅಹುದಹುದು. ಆದರೆ ಈಗೀಗ ಕೊಂಚಕೊಂಚ ಮರೆವುದಕ್ಕೆ ತೊಡಗಿದ್ದಾರೆ.

ಜಯ – ಯುವರಾಜ ಜೋಧಾ, ರಾಜಮಾನ–ಇವರೆಲ್ಲರೂ ಹೇಗಿರು ವರು?

ರಾಮ – ಎಲ್ಲರೂ ಚೆನ್ನಾಗಿರುವರು.

ರೂಪ – ನಮ್ಮ ಮೋಹಿನೀದೇವಿಯ ಮಗಳು ಹೇಗಿರುವಳು? ಆಕೆಯ ಹೆಸರೇನೊ ಇತ್ತು; ಈಗ ನನಗೆ ಜ್ಞಾಪಕಕ್ಕೆ ಬರುವುದಿಲ್ಲ.

ರಾಮ – ಹಂಸಾಬಾಯಿ. ಆಕೆ ಕೂಡ ಚೆನ್ನಾಗಿದ್ದಾಳೆ.

ಯಾದವ – ರಾಠೋರರಿಗೆ ಯವನರ ಹಾವಳಿಯೇನಾದರೂ ಇಲ್ಲವಷ್ಟೆ?

ರಾಮು — ಮೊನ್ನೆ ಏನೊ ಒಂದು ಸಲ ಅಲ್ಪಸ್ವಲ್ಪ ಸುಲಿಗೆ ಮಾಡಿಕೊಂಡು ಹೋದರು. ನಮ್ಮವರು ಹೋಗುವುದರೊಳಗಾಗಿ ಅಜ ಮಿರಿನ ಕಡೆಗೆ ನಡೆದುಬಿಟ್ಟರಂತೆ.

ಯಾದವ—ಯಾವಾಗಲೂ ಹೀಗೆಯೆ. ಕಾಳಗವೆಂದರಾಗದು ಅವರಿಗೆ!

ಲಾಖಾ— ಈಗ · ಯಾದವಸೇನ!

ಯಾದವ— ರಾಮುಸಿಂಗಜಿ! ತಾವು ಈ ಕಡೆ ದಯೆಮಾಡಿಸುವುದೆ ಅಪೂರ್ವ. ಈಗೇನಾದರೂ ವಿಶೇಷ ಕಾರ್ಯವಿದ್ದರೆ ಆಜ್ಞಾಪಿಸಬೇಕೆಂದು ರಾಣಾಜಿಯವರು ವಿಜ್ಞಾಪಿಸಿಕೊಳ್ಳುತ್ತಾರೆ.

ರಾಮು — ಕಾರ್ಯವಿಲ್ಲದೆ ಬರುತ್ತೇನೆಯೆ?

ಲಾಖಾ — ಸಿಜ ಸಿಜ! ಆಜ್ಞಾಪಿಸೋಣಾಗಲಿ —ನಮ್ಮಿಂದೇನಾಗಬೇಕೊ ಸಂಕೋಚವಿಲ್ಲದೆ ಹೇಳಿರಿ.

ರಾಮು—ರಾಣಾಜಿ! ನಾವು ಬಂದಿರುವುದು ರಾಜಕೀಯ ಕಾರ್ಯಕ್ಕೇನೂ ಅಲ್ಲ. ಕೇವಲ ಸಾಮಾಜಿಕ. ಇದೊ ನೋಡಿರಿ! — ಗುರುಜಿ! (ಪುರೋಹಿತನು ಶ್ರೀಫಲವನ್ನು ಸಿಂಹಾಸನದ ಬಳಿಗೊಯ್ಯುವನು.) —ಅದನ್ನು ಸ್ವೀಕರಿಸಿ ತಮ್ಮನ್ನು ಆನಂದಗೊಳಿಸಬೇಕೆಂಬುದೆ ರಾಠೋರರ ವಿನಂತಿ.

ಚೇಲಾ—ಏನದು?

ಯಾದವ—ಶ್ರೀಫಲ.

ಲಾಖಾ—ಏನು? ಶ್ರೀಫಲವೆ? ಏತಕ್ಕಾಗಿ? ರಾಠೋರರಿಗೇನು ಅವಗಡಣೆ ಬಂದೊದಗಿದೆ?

ಚೇಲಾ—ಅವಗಡಣೆಯಲ್ಲದೆ ಮತ್ತೇನು? ಹಂಸಾಬಾಯಿಯು ವಿವಾಹ ವಯಸ್ಕಳಾಗಿರುವಳಷ್ಟೆ?

ಲಾಖಾ—ಇದು ವಿವಾಹ ಸಮಾಚಾರವೇನು? ಸರಿ! ರಾಮುಜಿ! ತಾವು ತುಂಬ ವಿಚಕ್ಷಣರು! ಸರಿಯಾದ ವರನನ್ನೆ ಗೊತ್ತುಹಚ್ಚಿದಿರಿ!

ಚೇಲಾ — ಸರಿಯಲ್ಲದೆ ಮತ್ತೇನು? ಕ್ಷಮಿಸೋಣಾಗಲಿ—ತಾವೇನೊ ವಯಸ್ಸಿನಲ್ಲಿ ಕೊಂಚ ವೃದ್ಧರಾದರೂ ಧೈರ್ಯ ಶೌರ್ಯಾದಿಗಳಲ್ಲಿ ತರುಣರೆ ಆಗಿರುವಿರಿ.

ಲಾಖಾ—ಏನು ಚೇಲಾರಾಮ! ನನ್ನನ್ನು ಪುನಃ ಮದುಮಗನಾಗಿ ಮಾಡಬೇಕೆಂದು ನಿನಗೆ ಅಪೇಕ್ಷೆಯೇನೊ?

ಚೇಲಾ—ನನಗೆಂದರೇನು? ನಿಸೋದಿಯರೆಲ್ಲರಿಗೂ ಇದ್ದೀತು.

ರೂಪ—ಗೃಹಿಣಿಯಿಲ್ಲದ ಮನೆಗೆ ಗೃಹಿಣಿ ಬರುವುದೆಂದರೆ ಎಲ್ಲರಿಗೂ ಆನಂದವಲ್ಲವೆ?

ಲಾಖಾ—ಒಂದು ವೇಳೆ ನನ್ನಂತಹ ವೃದ್ಧನನ್ನು ಆಕೆಯು ಒಲ್ಲೆನೆಂದು ಬಿಟ್ಟರೆ ಏನು ಮಾಡಲಿ?

ಚೇಲಾ—ತಾವು ಅಷ್ಟು ಬೇಗನೆ ವೃದ್ಧರಾಗಿ ಬಿಟ್ಟಿರೇನೊ? ವಯಸ್ಸು ಇನ್ನೂ ಐವತ್ತು ದಾಟಿಲ್ಲ!

ಲಾಖಾ—ನನ್ನಂತಹನಿಗೆ ಇವೆಲ್ಲ ಏತಕ್ಕೆ ಬೇಕು?

ಯಾದವ—ಹಾಗೆಂದರೇನು? ಅಷ್ಟೊಂದು ಉದಾಸೀನರಾಗಿ ಬಿಟ್ಟಿರಲ್ಲ?

ಲಾಖಾ—ಉದಾಸೀನವಲ್ಲ. ತಾರುಣ್ಯದಲ್ಲಿ ಆಗಿದ್ದರೆ ಸರಿಯಿದ್ದೀತು; ಈಗ ರುಚಿಸದು. ರಾಮಸಿಂಗಜಿ! ಇದನ್ನು ನನಗೇತಕ್ಕಾಗಿ ಕೊಡಿಸುವಿರಿ? ಹಂಸಿಯು ಹಂಸವನ್ನೆ ಬಯಸುವುದಲ್ಲದೆ ನನ್ನಂತಹ ಬಕವನ್ನು ಬಯಸೀತೆ? ಇದೊ! ನಮ್ಮ ಚಂಡನಿದ್ದಾನೆ; ಆತನಿಗೆ ಕೊಡಿಸಿರಿ.

ಚಂಡ—ಅಪ್ಪಾಜಿ? ಇದೆಂತಹ ಮಾತು?

ಲಾಖಾ—ಏನು?

ಚಂಡ—ನಾನೀಕನ್ಯೆಯನ್ನು ಸರ್ವಥಾ ವರಿಸಲಾರೆ!

ಯಾದವ—ಚಂಡಾಜಿ! ಏನಿದು ಇಷ್ಟು ಆಗ್ರಹ?

ಚೇಲಾ—ಅದು ಸರಿ! ಮೊದಲು ಮೊದಲು ಹಾಗೆಯೆ!

ರಾಮ—ಯುವರಾಜ! ಅದು ನಮ್ಮ ರಾಠೋರರ ಹೆಣ್ಣೆಂದು ಹಾಗೆನ್ನುವಿರೇನೊ?

ಚಂಡ—ಛಿ ಛಿ! ಹಾಗೆಂದಿಗೂ ಅಲ್ಲ. ರಾಠೋರರು ನಮಗೆ ತುಂಬ ಪೂಜ್ಯರು.

ಜಯ—ಮತ್ತೇತಕ್ಕೆ ಒಲ್ಲೆನೆನ್ನುವೆ?

ಚಿಟಕೀಲಾ—ಹಂಸಾಬಾಯಿಯು ರೂಪವತಿಯಲ್ಲವೆಂದೇನು?

ರೂಪ—ರೂಪದ ವಿಚಾರ ನನಗೆ ಗೊತ್ತಿದೆ. ಮೋಹಿನೀರಾಣಿಯನ್ನು ಕಂಡಿರುವಿರಲ್ಲವೆ? ಹಂಸಾಬಾಯಿಯು ಆಕೆಯ ಪ್ರತಿಬಿಂಬವೆನ್ನ ಬಹುದು.

ಚಂಡ—ನಾನು ಸೌಂದರ್ಯದ ಪ್ರಸ್ತಾಪವನ್ನೆತ್ತಿಲ್ಲ.

ಲಾಖಾ—ಮತ್ತೇನು? ಗುಣಗಳೇನು?

ಚಂಡ—ಆಕೆಯು ತುಂಬ ಗುಣವತಿಯೆಂದು ಕೂಡ ಕೇಳಿ ಬಲ್ಲೆ!

ಲಾಖಾ—ಮತ್ತೇತಕ್ಕೆ ವರಿಸಲೊಲ್ಲೆ?

ಚಂಡ—ರಾಣಾಜಿ? ಹೇಗೆ ವರಿಸಲಿ?

ಲಾಖಾ—ಏನದು?

ಚಂಡ—ರಾಜಕುಮಾರಿಯು ನನಗೆ ಮಾತೃವಾಗಲಿಲ್ಲವೆ?

ಲಾಖಾ—ಹೇಗದು?

ರೂಪ—ಎಂತಹ ಮಾತು?

ಚಿಟಕೀಲಾ—ಏನು ಅಸಂಬದ್ಧ?

ಜಯ—ವಿಚಾರವಿಲ್ಲದೆ ಏನಾದರೂ ಹೇಳಿಬಿಡಬಾರದು.

ಚಂಡ—ವಿಚಾರವಿಲ್ಲದೆ ಆಡಿದ ಮಾತಲ್ಲ. ಅಪ್ಪಾಜಿಯವರ ಬಾಯಿಂದಲೆ ತಾವು ಈ ಕನ್ಯೆಯನ್ನು ವರಿಸುವ ವಿಚಾರ ಕೇಳಿದಿರಲ್ಲವೆ?

ಲಾಖಾ—ವಿನೋದಕ್ಕಾಗಿ ಅಲ್ಲವೇನು?

ಚಂಡ—ಸರಿ ಸರಿ! ರಾಣಾಜಿ! ತಾವು ಸಕಲ ಜನರ ಮಾನವನ್ನು ಕಾಪಾಡತಕ್ಕವರು. ತಾವೇ ಇಂತಹ ಮಾತುಗಳನ್ನಾಡಿದರೆ?

ಯಾದವ—ಚಂಡಾಜಿ! ಬಿಡಬಾರದೆ ಇಂತಹ ಛಲ? ರಾಣಾಜಿಯವರು ವಿನೋದಕ್ಕಾಗಿ ಆಡಿದ ನುಡಿಯನ್ನು ತಥ್ಯವೆಂದು ಸಾಧಿಸ ಬಹುದೆ?

ಚಂಡ—(ಆವೇಶಗೊಂಡು)—ಯಾದವಸೇನ! ಧಿಕ್ಕಾರ ಧಿಕ್ಕಾರವಿರಲಿ ನಿಮಗೆಲ್ಲ! ಇಂತಹ ಸಭೆಯಲ್ಲಿ ಕುಳಿತುಕೊಂಡು, ಅಬಲೆಯಾದ

ಒಬ್ಬ ಕನ್ನಿಕೆಯನ್ನು, ಆಕೆಯು ಇಲ್ಲದ ವೇಳೆಯಲ್ಲಿ ಈ ರೀತಿ ಅಪಮಾನ ಮಾಡಬಹುದೆ? ಒಂದು ವೇಳೆ ಆಕೆಯು ಇಲ್ಲಿಯೇ ಇರುತ್ತಿದ್ದರೆ, ಸ್ತ್ರೀಯರ ಮಾನವೆಂದರೆ ಏನೆಂಬುದು ನಿಮಗೆ ವಿದಿತವಾಗುತಿತ್ತು! ಛಿ! ನಿಮ್ಮ ಪೌರುಷಕ್ಕೆ ಧಿಕ್ಕಾರವಿರಲಿ!

ಯಾದವ — ಚಂಡಾಜೀ! ಶಾಂತನಾಗು. ನೀನಾಡಿದುದು ಯಥಾರ್ಥವೆ ಸರಿ. ರಾಣಾಜಿ! ನಾವು ಮಾಡಿದುದು ಕೇವಲ ಅಚಾತುರ್ಯದ ಕೆಲಸ. ಆದರೆ ಈಗ ಅದಕ್ಕೆ ಪಶ್ಚಾತ್ತಾಪಪಟ್ಟು ಪ್ರಯೋಜನ ವಿಲ್ಲ. ಚಂಡಸಿಂಗ! ಆಡಿದ ಮಾತು ಹಿಂದೆಗೆಯುವುದಕ್ಕೆ ಬಾರದು. ಅದನ್ನು ಮನಸ್ಸಿಗೆ ಹಚ್ಚಿ ಕೊಳ್ಳಬೇಡ.

ರಾಣಾ — ಚಂಡಾ! ಇಂತಹ ಅಲ್ಪವಾದುದಕ್ಕೆ ನೀನೀರೀತಿ ಆಗ್ರಹ ಗೊಂಡೀಯೆಂದು ನಾನೆಣಿಸಿರಲಿಲ್ಲ.

ಚಂಡ—ರಾಣಾಜಿ! ತಾವು ನನಗೆ ರಾಣರು; ಅಲ್ಲದೆ ಗುರುಗಳು. ನಾನೇನಾದರೂ ಆಡಬಾರದುದನ್ನು ಆಡಿದ್ದರೆ ಕ್ಷಮಿಸೋಣಾಗಲಿ. ಅಬಲೆಯ ಮಾನಕ್ಕೆ ಹಾನಿತರುವ ಮಾತುಗಳನ್ನು ನನ್ನಿಂದ ಸಹನ ಮಾಡುವುದಕ್ಕಾಗಲಿಲ್ಲ.

ರಾಣಾ—ಇರಲಿ, ಚಿಂತಿಲ್ಲ. ಈಗ ಅದೆಲ್ಲವನ್ನೂ ಮರೆತುಬಿಡು. ಆ ಶ್ರೀಫಲವನ್ನು ಸ್ವೀಕರಿಸು.

ಚಂಡ — ಅಪ್ಪಾಜಿ! ಕ್ಷಮಿಸೋಣಾಗಲಿ. ತಮ್ಮ ಸಕಲ ಆಜ್ಞೆಗಳೂ ನನಗೆ ಮಾನ್ಯವು. ಆದರೆ ಇದು ಕೇವಲ ಅಧರ್ಮ ಈಯೊಂದು ವಿಷಯದಲ್ಲಿ ಮಾತ್ರ ತಮ್ಮ ಆಜ್ಞೆಗೆ ವ್ಯತಿರಿಕ್ತವಾಗಿ ನಡೆಯ ಬೇಕಾಗುತ್ತಿದೆ.

ಯಾದವ — ಚಂಡಾಜಿ! ಅಧರ್ಮವಾಗುತಿದ್ದರೆ ನಾವೆಲ್ಲರೂ ಇದಕ್ಕೆ ಅನುಮತಿ ಕೊಡುತಿದ್ದುದೇನು?

ಚಂಡ—ಹೇಗೂ ಇರಲಿ. ನನ್ನ ಮಟ್ಟಿಗಲ್ಲದಿದ್ದರೂ ಆ ಕನ್ನಿಕೆಯ ಮಟ್ಟಿಗಾದರೂ ಅಧರ್ಮವಾಗುವುದು.

ಯಾದವ—ಹಾಗಾದರೆ ಈಗ ನಿನ್ನ ಅಭಿಪ್ರಾಯವೇನು?

ಚಂಡ—ನಾನೀ ಕನ್ನಿಕೆಯನ್ನು ಸರ್ವಥಾ ವರಿಸಲಾರೆ!

ಯಾದವ–ಹಾಗಾದರೆ ಶ್ರೀಫಲ ಹಿಂದೆ ಕಳುಹಬೇಕಾಗುವುದು.

ಚೇಲಾ—ಹಿಂದೆ ಕಳುಹಿದರೆ ಅದರ ಪರಿಣಾಮವೇನೆಂಬುದನ್ನು ಕೂಡ ಗ್ರಹಿಸಿಕೊಳ್ಳಲೆ ಬೇಕು. ಹಿಂದೆ ಕಳುಹಿಸಿಟ್ಟರೆ ರಾಠೋರರಿಗೆ ಅಪಮಾನ ಮಾಡಿದಂತಾಗುವುದು. ಇದು ತನಕವಿದ್ದ ಮೈತ್ರಿಯು ಶತ್ರುತ್ವದಲ್ಲಿ ಪರಿಣಮಿಸೀತು!

ಚಂಡ—ಹಿಂದೆ ಕಳುಹುವ ಆವಶ್ಯಕವೇನಿದೆ?

ಯಾದವ—ಮತ್ತೇನು ಮಾಡುವುದು?

ಚಂಡ—ರಾಣಾಜಿಯವರು ಸ್ವತಃ ವರಿಸಬೇಕು.

ಲಾಖಾ— ಇದೆಲ್ಲಿಯ ಮಾತು?

ಚಂಡ—ಅಪ್ಪಾಜಿ! ತಮ್ಮ ಮುಖದಿಂದ 'ಹಂಸಿಯು ಹಂಸವನ್ನೆ ಬಯಸೀತಲ್ಲದೆ ನನ್ನಂತಹ ಬಕವನ್ನು ಬಯಸೀತೆ' ಎಂಬ ಶಬ್ದಗಳಷ್ಟು ಹೊರಟವು. ಅದರಿಂದ ಅಭಿಪ್ರಾಯವೇನಾಗುವುದು? ಆ ಕನ್ನಿಕೆಯು ತಮ್ಮನ್ನು ವರಿಸಿದರಾಗ ಬಹುದಿತ್ತೆಂದು ಸೂಚಿಸಿದಂತಾಗಲಿಲ್ಲವೆ? ರಾಣಾಜಿ! ತಾವು ಮನಸಾವಾಚಾ ಆಕೆಯನ್ನು ವರಿಸಿರುತ್ತ, ಇನ್ನು ಇತರರು ವರಿಸುವುದೆಂದರೆ ತಾನೆ ಹೇಗಾದೀತು?

ಲಾಖಾ—ನನಗಾಗುವ ಸಕಲ ವೈಭವಗಳೂ ಆಗಿ ಹೋಯಿತು. ಇನ್ನು ಈ ಪ್ರಾಯದಲ್ಲಿ ವಿವಾಹವೆ?

ಯಾದವ– ರಾಣಾಜಿ! ಶ್ರೀಫಲ ಹಿಂದೆ ಕಳುಹಿಸುವುದಕ್ಕೆ ಬಾರದು! ಚಂಡಾಜಿಯು ಒಪ್ಪನು! ಆದುದರಿಂದ ತಾವು ಈ ಕನ್ನೆಯನ್ನು ವರಿಸುವ ವಿನಾ ಉಪಾಯಾಂತರವಿಲ್ಲವಷ್ಟೆ?

ಲಾಖಾ— ಹೇಗಾದೀತು? ಅನೇಕ ಪ್ರಶ್ನೆಗಳು ಬರಬಹುದು.

ರಾಮು—ರಾಣಾಜಿ! ನಾವು ಈ ಶ್ರೀಫಲವನ್ನು ತಂದು ತಮ್ಮೆಲ್ಲರೊಳಗೆ ಮನಸ್ತಾಪವನ್ನುಂಟುಮಾಡಿದ ಹಾಗಾಯಿತು.

**ಚಂಡ**—ಸಚಿವ ಶಿರೋಮಣಿ! ಮನಸ್ತಾಪವೇನು? ನಮಗೆ ಅತ್ಯಾನಂದ ವಾಗಿರುವುದು. ಲಕ್ಷ್ಮಿಯು ಮನೆಗೆ ಬರುವಂತಾಗುವುದು!

**ರಾಮ**—ಆದರೆ ರಾಠೋರ ರಾಜಕುಮಾರಿಯು ಸಿಸೋದಿಯಾ ರಾಣ ನಲ್ಲಿ ಕೇವಲ ದಾಸಿಯಂತಿರಲು ಹೇಗಾದೀತು?

**ಚೇಲಾ**—ಚಂಡಾಜಿ! ಇದು ತುಂಬ ಕಠಿಣ ಪ್ರಸಂಗ.

**ಲಾಖಾ**—ಬೇಡ, ಒಂದೂ ಬೇಡ. ರಾಮಸಿಂಗಜಿ! ಇಲ್ಲಿ ನಡೆದ ಸಂಗತಿಗಳೆಲ್ಲವೂ ತಮಗೆ ಗೊತ್ತಿರುವುದಷ್ಟೆ? ರಣಮಲ್ಲ ರಾಣರಿಗೆ ಇದನ್ನೆಲ್ಲ ವಿವರಿಸಿ ಹೇಳಿರಿ. ಯಾದವಾ! ಶ್ರೀಫಲ ಹಿಂದೆ ಹೋಗಲಿ!

**ಚಂಡ**—ಆಗದಾಗದು! ಎಷ್ಟು ಮಾತ್ರಕ್ಕೂ ಕೂಡದು! ರಾಣಾಜಿ! ತಾವು ಮನಸಾವಾಚಾ ಹಂಸಾಬಾಯಿಯನ್ನು ವರಿಸಿರುತ್ತ, ಆಕೆಯು ಇನ್ನೊಬ್ಬ ಪತಿಯನ್ನು ಪರಿಗ್ರಹಿಸುವುದು ಧರ್ಮವಿರುದ್ಧ! ತಾವಾಕೆಯನ್ನು ಗ್ರಹಣಮಾಡಲೆ ಬೇಕು!

**ಲಾಖಾ**—ಚಂಡಾ! ರಾಮಾಜಿಯವರ ಮಾತಿನ ಮರ್ಮವು ನಿನಗೆ ಸಂಪೂರ್ಣವಾಗಿ ತಿಳಿದಿಲ್ಲ. ಯಾದವಾ!

**ಯಾದವ**—ಚಂಡಾಜಿ! ರಾಣಾಜಿಯವರು ಹಂಸಾಬಾಯಿಯನ್ನು ವರಿಸಿದರೆಂದರೆ, ಆಕೆಯು ರಾಜಮಾತೆಯಾಗಬೇಕಾಗುವುದು; ಆಕೆಯ ಗರ್ಭದಲ್ಲಿ ಜನಿಸುವ ಮಗನೆ ಮುಂದಕ್ಕೆ ರಾಜನಾಗ ಬೇಕಾಗುವುದು!

**ಚಂಡ**—ಸರಿ, ನನಗೆ ಗೊತ್ತಿದೆ! ಹಾಗೆಯೆ ಆಗಲಿ. ನಾನೀ ರಾಜ್ಯಕ್ಕೆ ಆಸೆಪಡುತ್ತೇನೆಂದು ಭಾವಿಸಿದ್ದಿರೇನೊ? ವಿಭವವು ಕೇವಲ ಕ್ಷಣಿಕವಾದುದು. ಹಂಸಾಬಾಯಿಯ ಪುತ್ರನೆ ರಾಣನಾಗಲಿ. ನಾನು ಆತನ ಮುಂದಾಳುಗಳಲ್ಲೊಬ್ಬನಾಗಿದ್ದುಕೊಂಡು, ಆತನ ಸೇವೆಯನ್ನು ಏಕನಿಷ್ಠೆಯಿಂದ ಮಾಡಿಕೊಂಡಿರುತ್ತೇನೆ!

**ಚೇಲಾ**—ಸಾಕು! ಚಂಡಾಜಿ! ರಾಜಸ್ಥಾನವೆ ದಂಡೆತ್ತಿ ಬಂದರೂ ಚಿಂತಿಲ್ಲ. ನಿನ್ನೀ ಅಧಃಪತನವನ್ನು ನಮ್ಮಿಂದ ನೋಡು ವುದಕ್ಕಾಗಲಾರದು.

**ಚಂಡ**—ಅಧಃಪತನವೇನಿದೆ? ಸಿಸೋದಿಯಾವಂಶದ ಲಾಖಾ ರಾಣರ ಉದರದಲ್ಲಿ ಜನಿಸಿದುದು ಸಾರ್ಥಕವಾದಂತಾಗುವುದು.

**ರಾಮ**—ಲೋಕವು ಕಾಲಕ್ಕನುಸಾರವಾಗಿ ವ್ಯತ್ಯಸ್ತವಾಗುವುದುಂಟು.

**ಚಂಡ**—ಹಾಗೆಂದಿಗೂ ಗ್ರಹಿಸಬೇಡಿರಿ. ಇದೊ, ನಾನು ಪ್ರತಿಜ್ಞಾ ಪೂರ್ವಕ ಹೇಳುತ್ತೇನೆ!

**ಲಾಖಾ**—ಹಾ! ತಾಳು ತಾಳು!

**ಯಾದವ**—ಚಂಡಾಜಿ! ಏನು ಮಾಡುತ್ತಿರುವೆ? ವಿಚಾರ ಮಾಡಿಕೊ!

**ಚಂಡ**—ವಿಚಾರ ಮಾಡಿಯೆ ಈ ಕಾರ್ಯಕ್ಕೆ ತೊಡಗಿರುತ್ತೇನೆ. ಗುರುವಿನ ವಚನಕ್ಕೆ ಭಂಗ ಬಾರದಂತೆ, ಅಬಲೆಯ ಪಾತಿವ್ರತ್ಯಕ್ಕೆ ಲೋಪ ಬಾರದಂತೆ ಮತ್ತು ಮಾತೃಭೂಮಿಗೆ ಕ್ಷೋಭೆಯುಂಟಾಗದಂತೆ ಮಾಡುವುದಕ್ಕಾಗಿಯೆ ನಾನಿಂತಹ ಪ್ರತಿಜ್ಞೆಯನ್ನು ಮಾಡುತ್ತೇನೆ!—ನಾನು ನನ್ನ ಸರ್ವಸ್ವವನ್ನೂ ಹಂಸಾಬಾಯಿಯ ಪುತ್ರನಿಗಾಗಿ ಮನಃಪೂರ್ವಕವಾಗಿಯೂ ತ್ಯಾಗ ಮಾಡುತ್ತೇನೆ! ಇದಕ್ಕೆ ಏಕಲಿಂಗೇಶ್ವರನೆ ಸಾಕ್ಷಿ! * * * * ಏನು ಇನ್ನೂ ಸ್ತಬ್ಧರಾಗಿಯೆ ಕುಳಿತುಬಿಟ್ಟಿದ್ದೀರಿ? ರಾಣಾಜಿ! ವಿವಾಹಕ್ಕೆ ಸಮ್ಮತಿಸಿ ಶ್ರೀಫಲವನ್ನು ಸ್ವೀಕರಿಸೋಣಾಗಲಿ! ರಾಮಸಿಂಗಜಿ! ಕೊಡಿಸಬಾರದೆ? (ಎಲ್ಲರೂ ಯೋಚಿಸುತ್ತಿರುವರು.) —ಇದೇನು ಯೋಚನೆ? ನಿಮಗಿನ್ನೂ ಸಂದೇಹವಿದೆಯೇನೊ? ನನ್ನ ತರುವಾಯ ನನ್ನ ಮಕ್ಕಳಿಂದೇನಾದರೂ ಛಿದ್ರ ಬಂದೀತೆಂಬ ಅನುಮಾನವಿರಬಹುದು. ಇರಲಿ. ಇದೊ, ನಾನು ಪಂಚಭೂತಗಳ ಸಾಕ್ಷಿಯಾಗಿಯೂ ಹೇಳುತ್ತೇನೆ! ನಾನು ವಿವಾಹವನ್ನೆ ಮಾಡಿಕೊಳ್ಳುವುದಿಲ್ಲ! ಮರಣಪರ್ಯಂತವೂ ಬ್ರಹ್ಮಚರ್ಯವನ್ನೆ ಆಚರಿಸಿಕೊಂಡಿರದೆ ಹೋದರೆ, ನಾನು ಸಿಸೋದಿಯಾ ವಂಶಸಂಭೂತನೆ ಅಲ್ಲ! ಇದಕ್ಕೆ ತಪ್ಪಿದ ಪಕ್ಷಕ್ಕೆ ನನಗೆ ಘೋರತರವಾದ ರೌರವವು ಪ್ರಾಪ್ತವಾಗಲಿ!

**ಯಾದವ**—ರಾಣಾಜಿ! ರಜಪೂತನಿಗೆ ವಚನಭಂಗಕ್ಕಿಂತಲೂ ಮರಣವೆ ಲೇಸು. ಇನ್ನು ಚಂಡಾಜಿಯು ತಪ್ಪುವುದಕ್ಕೆ ಕೂಡದು.

ವಿಧಿಯನ್ನು ಮೀರುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ದೈವತಂತ್ರವು ಅರಿಯಲು ಬಾರದು. ಶ್ರೀಫಲವನ್ನು ಪರಿಗ್ರಹಿಸಿರಿ. ಗುರುಜಿ! ಕೊಡಿರಿ.

**ಲಾಖಾ**—(ಶ್ರೀಫಲವನ್ನು ಸ್ವೀಕರಿಸಿ) — ಚಂಡಾ!

**ಚಂಡ**—(ಉತ್ಸಾಹದಿಂದ ಅಡಿಗೆರಗುವನು.)—ಅಪ್ಪಾಜಿ!

**ಲಾಖಾ**—ದ್ವಾಪರದಲ್ಲಿ ಭೀಷ್ಮನು ಈ ರೀತಿಯ ಸ್ವಾರ್ಥತ್ಯಾಗವನ್ನು ಮಾಡಿದ್ದನಂತೆ. ಈಗಿನ ಕಲಿಯುಗಕ್ಕೆ ನೀನೆ ಭೀಷ್ಮನೆನಿಸಿಕೊಂಡೆ! ಯಶೋವಂತನಾಗು! ದೀರ್ಘಾಯುವಾಗಿ ಬಾಳು! ಏಕಲಿಂಗೇಶ್ವರನು ನಿನ್ನನ್ನು ಅನುಗ್ರಹಿಸಲಿ!

## ೪. ಗೌರೀಪೂಜೆ.

ಹಂಪಿ—ಏನೆ ಜಂಕೀ? ನಿನ್ನ ಕೆಲಸವೇನೂ ಆಗಲಿಲ್ಲವೇನು?

ಜಂಕಿ—ಏನವ್ವಾ! ಹೀಗೂ ಅವಸರ? ನೀನು ಏಳೆ ತಿಂಗಳಲ್ಲಿ ಹುಟ್ಟಿದವಳಂತೆ ಮಾಡುತ್ತಿರುವೆಯಲ್ಲ?

ಗಂಗಾ—ಅಹುದು ಮತ್ತೆ, ಪಾಪ! ಯಾವಾಗ ನೋಡಿದರೂ ಆಕೆಯನ್ನೆ ಕೆಣಕುವುದು.

ಕಮಲಾ—ಏನು ಮಾಡುವುದು ಹೇಳು! ಲೋಕವೆ ಹಾಗೆ!

ಗಂಗಾ—ಅಹುದೀಗ. ನಮ್ಮ ಕಮಲಾವತಿಯಾದರೆ ಯಾರ ತಳ್ಳಿಗೂ ಹೋಗುವಳಲ್ಲ. ಬಲು ಜಾಣೆ!

ತಾರಾ—ಸಾಕು ನಿಮ್ಮ ಜಾಣತನ. ಎಲ್ಲರೂ ಈ ಕಡೆ ಬನ್ನಿ ನೋಡೋಣ. ಗೌರೀದೇವಿಯನ್ನು ಇಂದು ತುಂಬ ಶ್ರದ್ಧೆಯಿಂದ ಪ್ರಾರ್ಥಿಸಿಕೊಳ್ಳಬೇಕು.

ಕಮಲಾ—ಆಗಲೆ ಆಯಿತಷ್ಟೆ?

ತಾರಾ—ಹಾಗಲ್ಲ. ನಮ್ಮ ಹಂಪಿಯು ಕನ್ನಿಕೆಯಾಗಿ ಪೂಜೆಮಾಡುವುದು ಇದೇ ಕೊನೆಯ ಸಲ.

ಹಂಪಿ—ತಾರೆ! ಸ್ವಲ್ಪ ಸುಮ್ಮಗಿರ ಬಾರದೆ? ನಿನ್ನ ಬಾಯಾದರೂ ಎಷ್ಟು ಹರಕು!

ಕಮಲಾ—ಅದೇನೇ ಹಾಗನ್ನುತ್ತೀ? ತಾರಾಬಾಯಿ ಹೇಳಿದುದು ಸರಿಯಲ್ಲವೇನು?

ಗಂಗಾ—ಮದುವೆಯೆಂದರೆ ನಾಚಿಕೆಯಾಗುತ್ತಿದೆಯೊ ಏನೊ? ಪಾಪ!

ಜಂಕಿ—ಹಂಪೀ! ನೀನು ಬಾರವ್ವಾ! ಇವರಿಗೆಲ್ಲ ಹಾಸ್ಯಮಾಡುವುದೊಂದೆ ಕೆಲಸ!

ಹಂಪಿ—ಮಾಡುತ್ತಿರಲಿ. ನಮಗೇನು ಅದರಿಂದ? ನಾವು ಕ್ರೀಡಾವನಕ್ಕೆ ಹೋಗೋಣವೆ?

ಜಂಕಿ—ಹೋಗೋಣ, ನಡಿ.

ತಾರಾ—ಕಮಲೀ! ಕಮಲೀ! ನೋಡು ನೋಡು! ಹಂಸಿ ಜಂಕಿಯ ಆಶ್ರಯ ಆದಷ್ಟು ಮಾಡುತ್ತಾಳೆ!

ಕಮಲಾ—ಮಾಡದೆ ಮತ್ತೆ?

ಗಂಗಾ—ಹಾಗೆಂದರೇನೆ?

ಕಮಲಾ—ನನಗೇನು ಗೊತ್ತು! ಆಕೆಯನ್ನೆ ಕೇಳು.

ಗಂಗಾ— ಏನು ಕೇಳುವುದೊ, ಏನು ಹೇಳುವುದೊ?

ಜಂಕಿ—ಅಹುದುರವ್ವಾ! ನೀವೆಲ್ಲರೂ ಶ್ರೀಮಂತೆಯರು—

ತಾರಾ—ಕೇಳಿದಿರೇನವ್ವಾ! ಜಂಕಿಯ ಮಾತು? ನಾವೆಲ್ಲರೂ ಶ್ರೀಮಂತೆಯರಂತೆ! ತಾನು ಮಾತ್ರ ಭಿಕ್ಷುಕಿಯೇನೊ? ಏನೆ ಜಂಕೀ! ನಿಮ್ಮಪ್ಪ ನಿನಗೇನೂ ಒಡವೆ ಮಾಡಿಸಿ ಕೊಡಲಿಲ್ಲವೆಂದು ಕಾಣುತ್ತಿದೆ! ಪಾಪ! ಅವರಿಗಾದರೂ ಎಲ್ಲಿಂದ ಸಮಯ? ಯಾವಾಗ ನೋಡಿದರೂ ರಾಜಕಾರ್ಯ! ಏನಾದರೂ ರಾಮ ಸಿಂಗಜಿಯವರು ಮಂತ್ರಿಪ್ರಧಾನರಲ್ಲವೆ?

ಕಮಲಾ— ಅದೇನೂ ನಮ್ಮ ಜಂಕಿಗೆ ಚಿನ್ನ ಬಣ್ಣ ಒಂದೂ ಬೇಡ! ಹರಿಕು ಬಾಯವರು ಮಾತಾಡುವುದಕ್ಕೆ ಸಿಕ್ಕಿದರೆ ಸೈ!

ಜಂಕಿ—ಅಲ್ಲವೆ ಮತ್ತೆ? ನಾನೊಬ್ಬಳೆ? ನಿನ್ನ ಬಾಯಿಗೆ ಬೀಗ ಹಾಕಿಕೊಂಡಿರುವೆಯೆಂದು ಕಾಣುತ್ತಿದೆ!

ಹಂಸಿ—ಏನಿರವ್ವಾ! ಪಾಪದವಳು ಸಿಕ್ಕಿದರೆ ನಿಮ್ಮ ಬಾಯಲ್ಲಿ ನಿಲ್ಲುವುದಕ್ಕಿಲ್ಲ. ಜಂಕೀ! ಹೋಗೋಣ, ಬಾ.

ತಾರಾ—ಅದೆಲ್ಲವೂ ಹಾಗಿರಲಿ. ಈಗ ನಿನಗೇನು ಜಂಕಿಯ ಮೇಲೆ ಅಷ್ಟೊಂದು ಮಮತೆ?

ಗಂಗಾ— ಅದು ಬೇರೆ ಕೇಳಬೇಕೇನು? ಜಂಕಿಯ ಹತ್ತಿರ ಏನೊ ಅಂತರಂಗ ಕೇಳುವುದಕ್ಕಿದೆ. ಅದಕ್ಕಾಗಿಯೆ ಅವರಿಬ್ಬರೆ ತೋಟಕ್ಕೆ ಹೋಗುತ್ತಾರಂತೆ.

ಕಮಲಾ—ಏನಪ್ಪ ಅಂತಹ ಅಂತರಂಗ?

ಗಂಗಾ—ಹೇಳಬೇಕೆ? ಏನೆ ಹಂಸಿ? ಹೇಳಲೆ?

ತಾರಾ— ಏನೆ ಗಂಗೂ? 'ಹಂಸಿ ಹಂಸಿ' ಎಂದು ಕರೆಯುತ್ತಿಯಾ? ಈಕೆ ಯಾರೆಂದೆಣಿಸಿರುವೆ?

ಗಂಗಾ—ಓಹೊ! ತಪ್ಪಿತು ತಪ್ಪಿತು! ರಾಣೀ ಸಾಹೇಬರೆ!

ಹಂಸಿ—ಸಾಕೆ ನಿನ್ನ ಪರಿಹಾಸ!

ಕಮಲಾ— ಓಹೊ! ತಿಳಿಯಿತು ತಿಳಿಯಿತು! ಜಂಕೀ! ನೀವಿಬ್ಬರೆ ತೋಟಕ್ಕೆ ಹೋಗಿ. ನಾವಿಲ್ಲೆ ಇರುತ್ತೇವೆ ಬಲ್ಲೆಯಾ?

ಹಂಸಿ—ನಿಮ್ಮೆಲ್ಲಾರು ಬರುವುದು ಬೇಡವೆಂದರು?

ಕಮಲಾ—ನಾವೆಲ್ಲರೂ ಬಂದರೆ ನಿಮ್ಮ ಮಾತಿಗೆ ಅಡ್ಡಿಯಾದೀತು. ಜಂಕೀ! ಮೇವಾಡದ ಸಮಾಚಾರ ಎಲ್ಲವನ್ನೂ ವಿವರಿಸಿ ಹೇಳು, ಬಲ್ಲೆಯಾ? ಅದರಲ್ಲಿಯೂ ರಾಣಾಸಾಹೇಬರನ್ನು ಮರೆತು ಬಿಡಬೇಡ!

ಹಂಸಿ—ನಿನಗೇನಾದರೂ ಹುಚ್ಚುಗಿಚ್ಚು ಹಿಡಿಯಿತೇನು?

ಕಮಲಾ—ನೀನೊಂದು ಮಾಡು—ನಿನಗೆ ಚೆನ್ನಾಗಿ ಗೊತ್ತಿಲ್ಲದಿದ್ದರೆ ನಿಮ್ಮಪ್ಪನನ್ನು ಕೇಳಿಕೊಂಡಾದರೂ ಬಂದು ಹೇಳು.

ಹಂಸಿ—ಇನ್ನಿಯಪ್ಪ! ನಾನು ಮತ್ತೆ! (ಹೊಡೆಯ ಹೋಗುವಳು.)

ತಾರಾ—ಕಮಲೀ! ನೋಡಿಕೊ! ಇಷ್ಟರ ವರೆಗಿನ ಹಂಸಿಯಲ್ಲ. ಹಜ್ಜೆ ನೋಡಿ ಮಾತನಾಡಬೇಕು!

ಹಂಸಿ—ಆಯಿತು. ಇನ್ನೊಬ್ಬಳು ಬಂದಳು!

ತಾರಾ—ಇಲ್ಲವ್ವಾ ಇಲ್ಲ. ನಿನ್ನ ತಳ್ಳಿ ನನಗೆ ಬೇಡ. ನೀನೀಗಲೆ ನಮ್ಮೆಲ್ಲರನ್ನು ಕಣ್ಣೆತ್ತಿ ನೋಡದವಳು! ಇನ್ನು ಮೇವಾಡದ ರಾಣಿಸ ಪಟ್ಟಮಹಿಷಿಯಾದ ಮೇಲೆ ನಾವು ನಿನ್ನ ಕಣ್ಣಿಗೆ ಕಾಣಿಸುವುದುಂಟೆ?

ಹಂಸಿ—ಆಯಿತು. ಎಷ್ಟು ಬೇಕಾದರೂ ಹೇಳಿಕೊಳ್ಳಿ. ನಾನೇನೂ ಮಾತಾಡುವುದಿಲ್ಲ.

ಜಂಕಿ— ಅಹುದೀಗ. ಹಾಸ್ಯಮಾಡಲಿ. ಎಷ್ಟು ದಿನ ಮಾಡಿಯಾರು? ಇನ್ನು ಆರು ದಿನ ಮಾಡಿಯಾರು. ಮತ್ತೇನಾದರೂ ಸಾಧ್ಯವೆ?

ತಾರಾ—ಅಹುದು, ಇನ್ನು ಆರೇ ದಿನ. ಆ ಮೇಲೆ ನಾವೆಲ್ಲಿಯೊ ನೀವೆಲ್ಲಿಯೊ?

ಹಂಸಿ—ಏಕೆ?

ತಾರಾ—ಏಕೆಂದರೆ? ನಿನಗೆ ವಿವಾಹವಾಗುವುದಲ್ಲವೆ?

ಹಂಸಿ—ವಿವಾಹವಾದರೇನಾಯಿತು?

ತಾರಾ—ರಾಠೋರಣಿಯು ಸಿಸೋದಿಯಾ ರಾಣಿಯಾಗಿ ಕುಣಿಯುತ್ತಾಳೆ!

ಜಂಕಿ—ನೀವು ಸಹ ಕುಣಿಯಿರಿ; ಯಾರು ಬೇಡವೆನ್ನುತ್ತಾರೆ?

ತಾರಾ—ಸರಿ ಸರಿ. ಮತ್ತೆ ನಮ್ಮನ್ನಾರು ಕೇಳುವವರು? ನಾನು—ತಾರೆ—ಎಲ್ಲಾದರೂ ಹಾರಿಹೋಗಬೇಕು. ಕಮಲಿ ಕಂಬಳಿ ಹುಡುಕಿಕೊಂಡು ಹೋಗಬೇಕು. ಆ ಮೇಲೆ ಗಂಗೆ ಮಂಗ ಸಂತೆಯ ಸರಿ. ನೀನೊಬ್ಬಳು ಜಂಕಿ ಮಾತ್ರ ಧಿಂಕಿಡುತ್ತಿರ ಬಹುದು!

ಜಂಕಿ—ಸರಿ. ಕೊನೆಗೆಲ್ಲವೂ ನನ್ನ ತಲೆಯ ಮೇಲೆ?

ಹಂಸಿ—ಹಾಗಲ್ಲವೆ! ನಿನಗದು ಅರ್ಥವಾಗಲಿಲ್ಲ ನೋಡು! ತಾರೆ ವರ ಹುಡುಕಿಕೊಂಡು ಹೋಗುತ್ತಾಳೆ. ಕಮಲಿ ನೇಪಾಳಕ್ಕೆ ಹೋಗುತ್ತಾಳೆ. ಗಂಗೆ ವಂಗಕ್ಕೆ ಹೋಗುತ್ತಾಳೆ. ನೀನೊಬ್ಬಳು ಮಾತ್ರ ಇಲ್ಲೇ ಇರುತ್ತಿ ಎಂದರ್ಥ, ತಿಳಿಯಿತೆ?

ಜಂಕಿ—ಏಕಪ್ಪಾ ಹಾಗೆ ಹೋಗುವುದು?

ಹಂಸಿ—ಮದುವೆ ಮಾಡಿಕೊಂಡರೆ ಗಂಡನ ಮನೆಗೆ ಹೋಗುವುದು ಬೇಡವೇನು?

ತಾರಾ—ಸರಿ, ಒಂದೆ ಯೋಚನೆ! ಹಂಸೀ, ಸುಮ್ಮಗೆ ಕೊರಗಬೇಡ ಕಂಡೆಯಾ? ನಾಳೆ ಇಷ್ಟು ಹೊತ್ತಿಗೆ ಮೇವಾರಕ್ಕೆ ಹೊರಟು ಹಾದಿಯಲ್ಲಿರುತ್ತೇವೆಯಷ್ಟೆ? ಮತ್ತೊಂದು ನಾಲ್ಕು ದಿನಗಳಲ್ಲಿ ರಾಣಾಸಾಹೇಬರನ್ನು ಕಣ್ಣಾರೆ ನೋಡುವೆಯಂತೆ!

ಹಂಸಿ—ಸಾಕು ನಿನ್ನ ಮಾತು! ನನಗೇನೂ ಅಂತಹ ಆತುರವಿಲ್ಲ.

**ಗಂಗಾ**— ಏಕಪ್ಪ ಹಾಗೆ? ರಾಣಾಸಾಹೇಬರ ವಯಸ್ಸು ನೋಡಿಯೆಂದು ಕಾಣುತ್ತಿದೆ.

**ಕಮಲಾ**—ವಯಸ್ಸಿಗೇನಾಗಿದೆ? ತುಂಬಿದ ಯೌವನ! ಐವತ್ತು ಇನ್ನೂ ದಾಟಿಲ್ಲವಂತೆ!

**ಗಂಗಾ**—ಅದೇ ನಾನು ಕೂಡ ಹೇಳುವುದು. ನಮ್ಮ ದೊಡ್ಡಪ್ಪನ ಮಗಳ ಗಂಡ ಐವತ್ತಾರನೆ ವರುಷದಲ್ಲಿ ಮದುವೆಮಾಡಿಕೊಳ್ಳ ಲಿಲ್ಲವೇನು? ಏನೆ ಜಂಕೀ! ನಿಮ್ಮಕ್ಕನ ನಾದಿನಿಯ ಗಂಡನಿಗೆ ಎಷ್ಟು ಪ್ರಾಯದಲ್ಲಿ ಮದುವೆಯಾಯಿತು?

**ಜಂಕಿ**—ಅರುವತ್ತನೆಯ ವರುಷವಂತೆ!

**ಗಂಗಾ**— ನೋಡಿದಿರಾ! ವಯಸ್ಸು ಕಟ್ಟಿಕೊಂಡು ಮಾಡುವುದೇನು? ಎಲ್ಲವೂ ಬೆಳೆವಣಿಗೆಯ ಮೇಲಿದೆ.

**ಕಮಲಾ**—ಅದೇನೂ ನಿಜ. ಸಿಸೋದಿಯಾ ರಾಣರನ್ನು ನೋಡಿದರೆ ಐವತ್ತು ವರುಷವೆಂದು ಯಾರೂ ಹೇಳುವ ಹಾಗಿಲ್ಲ! ಏನು? ಮೂವತ್ತಯ್ದು ಕಟ್ಟಿಯಾರು! ಅಲ್ಲವೇನೆ ಹಂಸಿ?

**ಹಂಸಿ**—ಏನಪ್ಪ? ನನಗೊಂದೂ ತಿಳಿಯದು.

**ಗಂಗಾ**—ನಾನು ಹೇಳುತ್ತೇನೆ ಕೇಳು. ಈಗಿನ ಕಾಲದ ಹಂಗುಸರೆಂದರೆ ಪುರಾಣದ ಹೆಂಗುಸರಲ್ಲ, ತಿಳಿಯಿತೆ? ಮೈತುಂಬ ಚಿನ್ನ, ಬಾಯಿ ತುಂಬ ಮಾತು, ಕೈತುಂಬ ರೊಕ್ಕ— ಇಷ್ಟಿದ್ದರೆ ತೀರಿತು! ವಯಸ್ಸೊ ಗಿಯಸ್ಸೊ ಅದನ್ನೆಲ್ಲ ಯಾರು ಕಟ್ಟಿಕೊಳ್ಳುತ್ತಾರೆ?

**ಜಂಕಿ**—ಏನು ಬೇಕಾದರೆ ಹೇಳಿ. ಮೀಸೆ ಕೂಡ ಬಾರದ ಆ ಚಿಕ್ಕ ಹುಡುಗ. — ಚಂಡನೊ ಪುಂಡನೊ, ಯಾರವ? ಅವನಿಗಿಂತ ಅವನಪ್ಪನೆ ಎಷ್ಟೊ ವಾಸಿ! ಅಲ್ಲವೇನೆ, ಹಂಸಿ?

**ಹಂಸಿ**—ಏನೊ? ನನಗೆ ಗೊತ್ತಿಲ್ಲ!

**ಗಂಗಾ**— ಸೀಸೇಸು, ಮಾತುಮಾತಿಗೂ 'ನನಗೆ ಗೊತ್ತಿಲ್ಲ, ನನಗೆ ಗೊತ್ತಿಲ್ಲ' ಎಂದು ಹೇಳುತ್ತಿರುವೆ? ಓಹೊ! ರಾಣೀಸಾಹೇಬರೆ! ಅಷ್ಟು ಬೇಗನೆ ತಮ್ಮ ಕಣ್ಣುಕಟ್ಟಿ ಹೋಯಿತೇನು? ನಮ್ಮಂತಹ ಬಡವೆಯರ ಹತ್ತಿರ ಮಾತನಾಡುವ ರೀತಿ ಈಗಿನಿಂದಲೆ ಪಾಟ ಮಾಡುವಿರೆಂದು ಕಾಣುತ್ತಿದೆ. ಇರಲಿ ಇರಲಿ. ನಾವು ಬಾಲ್ಯದಿಂದಲೂ ತಮ್ಮ ಕೆಳದಿಯರಾಗಿದ್ದವರಲ್ಲವೆ? ನಮ್ಮ ನ್ನಷ್ಟು ಬೇಗನೆ ಮರೆತು ಬಿಡಬೇಡಿರಿ!

(ನಗುವಿನ ಹೊಯ್ಲಿನಿಂದ ಹಂಸಿಯು ಸರಸರನೆ ಹೊರಟು ಹೋಗುವಳು.)



## ೧೪. ಕುಮಾರೋದಯ.

[ಯಾದವಸೇನನು ಯೋಚಿಸುತ್ತಿರುವನು.]

**ಚೇಲಾ**—(ಪ್ರವೇಶಿಸಿ)—ಏನು ಯಾದವಜೀ? ತುಂಬ ಯೋಚಿಸುತ್ತಿರುವಿರಲ್ಲ?

**ಯಾದವ**—ಓಹೊ! ನಾನು ತಮ್ಮನ್ನು ನೋಡಲೇ ಇಲ್ಲ.

**ಚೇಲಾ**—ಅದು ಹಾಗೆಯೆ. ಮೇವಾಡವನ್ನೆ ಆಳುವವರಿಗೆ ನಮ್ಮಂತಹ ಅಲ್ಪ ಸೇನಾಪತಿಗಳು ಹೇಗೆ ತಾನೆ ಕಾಣಿಸುವರು?

**ಯಾದವ**—ಆ ಪರಿಹಾಸ ಹಾಗಿರಲಿ. ಚೇಲಾಜಿ! ನಿಮ್ಮ ಅಭಿಪ್ರಾಯವೇನು?

**ಚೇಲಾ**—ನಮ್ಮ ಅಭಿಪ್ರಾಯವೆ? ಸರಿ. ನಾವು ತೀರ ಬಡವರು—

**ಯಾದವ**—ನಿಮ್ಮ ಬಡತನ ಗಿಡತನ ನನಗೆ ಗೊತ್ತಿದೆ. ಚಂಡಾಜಿಯ ವಿಚಾರವೇನು?

**ಚೇಲಾ**—ಏನು? ಚೆನ್ನಾಗಿಲ್ಲವೆ?

**ಯಾದವ**—ಹಾಗಲ್ಲ. ಇದು ತನಕ, ಹಂಸಾಬಾಯಿಗೆ ಮಕ್ಕಳು ಹುಟ್ಟದೆ ಹೋದರೆ ಚಂಡಾಜಿಯು ರಾಜ್ಯಭಾರವನ್ನು ವಹಿಸುವನೆಂಬುದೊಂದು ಆಸೆಯಿತ್ತು. ಈಗ ಅದು ಕೂಡ ಹೋದಂತೆಯೆ ಸರಿ.

**ಚೇಲಾ**—ಚೆನ್ನಾಯಿತು ಚೆನ್ನಾಯಿತು! ಮಹಾರಾಣಿಗೆ ಪುತ್ರೋತ್ಸವವಾಯಿತೆಂದು ನಿಮಗೆ ವ್ಯಥೆಯುಂಟಾಗಿದೆಯೇನೊ?

**ಯಾದವ**—ವ್ಯಥೆಯೆಲ್ಲಿಂದ? ಸಂತೋಷವೆ. ಚಂಡಾಜಿಯು ಮಾತ್ರ ಹಾವಾಡಿಗರ ಹಾವಿನಂತಾದನೆಂಬುದೊಂದೆ ಚಿಂತೆ.

**ಚೇಲಾ**—ಅದು ಈಗಲೆ? ಮೊದಲೆ ಆಗಿದ್ದಾನೆ. ನಾಲ್ಕು ವರುಷಗಳಾಗಲಿಲ್ಲವೆ? ಅಂದು ಸಭೆಯಲ್ಲಿ ಪ್ರತಿಜ್ಞೆ ಮಾಡಿದ ಮೇಲೆ ಇನ್ನು ಹಿಂದೆಗೆದಾನೆಂದು ಯೋಚಿಸಿದ್ದಿರೇನೊ? ಎಂದಿಗೂ ಇಲ್ಲ. ಮಾತು ತಪ್ಪುವುದಕ್ಕಿಂತಲೂ ಮರಣವನ್ನೆ ಬಯಸಿಯಾನು. ತಮಗೆ ಕೊಂಚವೂ ಅನುಮಾನ ಬೇಡ.

**ಯಾದವ**—ಅನುಮಾನದ ಮಾತಲ್ಲ. ಆತನಂತಹ ದಾಕ್ಷಿಣ್ಯವರ್ತಿಯೂ ಧರ್ಮಭೀರುವೂ ರಣಧೀರನೂ ಮೇವಾರಕ್ಕೊಡೆಯನಾದನೆಂದರೆ ಅದು ಭಾಗ್ಯವೆ ಸರಿಯೆನ್ನಬೇಕು.

**ಚೀಲಾ**—ಆದರೆ ಅದಕ್ಕೇನು ಮಾಡುವುದು? ಅಂಬಾ ಭವಾನಿಯ ಭಾವಕ್ಕೆ ಬಾರದೆ ಹೋಯಿತು. ಆದರೆ-ಯಾದವಜಿ! ಚಂಡನ ಸಾತ್ವಿಕವೃತ್ತಿಯನ್ನಾದರೂ ನೋಡಿದಿರಾ? ತನಗೆ ಕೊಂಚ ವಾದರೂ ಮನಃಕ್ಲೇಶವಿರುವಂತೆ ಕಾಣಿಸಿಕೊಳ್ಳುವುದಿಲ್ಲ.

**ಯಾದವ**—ಇದ್ದರಲ್ಲವೆ ಕಾಣಿಸಿಕೊಳ್ಳುವುದು? ಹಂಸಾಬಾಯಿಯ ಪುತ್ರನಲ್ಲಿ ವೈಮನಸ್ಸುಂಟಾಗಿದ್ದರೆ, ಮೊನ್ನೆ ಆ ಬೆಳ್ಳಿಯ ಗನಿಯ ವಿಷಯ ಅಷ್ಟೊಂದು ಪ್ರಯತ್ನ ಮಾಡುತಲಿದ್ದನೆ?

**ಚೀಲಾ**—ನಿಜ ನಿಜ. ಹಂಸಾಬಾಯಿಯಲ್ಲಿ ಆತನ ವರ್ತನೆಯನ್ನು ನೋಡಿದರೆ ಗೊತ್ತಾಗುವುದಿಲ್ಲವೆ? ಆ ಮಗುವನ್ನಂತೂ ದಿನಕ್ಕೆ ಹತ್ತು ಸಲ ನೋಡಿಕೊಂಡು ಬಾರದೆ ಹೋದರೆ ಆತನಿಗೆ ನಿದ್ದೆಯೆ ಹತ್ತದು.

**ಯಾದವ**—ಅಹುದಹುದು. ಆ ಮಗುವನ್ನು ತುಂಬ ಮುದ್ದಾಡುತ್ತಾನೆ. ಅದಕ್ಕೆ ಕೂಡ ಆತನನ್ನು ಕಂಡರೆ ಬಲು ಪ್ರೇಮ.

**ಚೀಲಾ**—ಹೆಸರೇನಿಟ್ಟಿರುವರೊ?

**ಯಾದವ**—ಹಾಗೇನು ಕೇಳುವಿರಿ? ಮಗುವಿಗೆ ಮೂರು ವರುಷವಾದರೂ ಹೆಸರು ನಿಮಗಿನ್ನೂ ಗೊತ್ತಿಲ್ಲವೆ?

**ಚೀಲಾ**—'ಮೋಕಿ ಮೋಕಿ' ಎಂದು ಕರೆಯುತಿದ್ದರು. ಆ ಹೆಸರೆ ಗೊತ್ತು.

**ಯಾದವ**—ಹಾಗೇನೊ? ಮುಕುಳನೆಂದು ಹೆಸರು.

**ಚೀಲಾ**—ಸರಿ. 'ಮುಕುಳ!' ಈಗಿನ ಮುಕುಳನು ಮುಂದಕ್ಕೆ ವಿಕಸನ ವಾಗುವಾಗ ರಾಜಸ್ಥಾನವೆಲ್ಲವನ್ನೂ ಸುವಾಸನೆಯಿಂದ ತುಂಬಲಿ!

**ಯಾದವ**—ಅದೇ ನಮ್ಮ ಪ್ರಾರ್ಥನೆ.—ನಾಳಿನ ಪ್ರಾತಃಕಾಲ ನಾವೆಲ್ಲರೂ ರಾಣರನ್ನು ಕಾಣಬೇಕಂತೆ.

**ಚೇಲಾ** — ಏನು ವಿಶೇಷವಪ್ಪ? ಅದಿಲನನ್ನು ಇದಿರಿಸುವುದಕ್ಕೆ ರಾಣಾಜಿಯವರೆ ಸ್ವಂತವಾಗಿ ಹೋಗುವುದೆಂದು ನಿಷ್ಕರ್ಷೆಯಾಗಿದೆ. ಇನ್ನೇನು ಮಂತ್ರಾಲೋಚನೆ ಇರಬಹುದು?

**ಯಾದವ**— ಅದಿಲನು ಪ್ರಬಲನು. ತಾವು ಗಯಾಕ್ಷೇತ್ರದಿಂದ ಜೀವಂತರಾಗಿ ಹಿಂದೆ ಬರುವುದು ಸಂದೇಹದ ಮಾತಾಗಿದೆ ಆದುದರಿಂದ ಮುಂದಕ್ಕೆ ಮೇವಾರದ ವ್ಯವಸ್ಥೆಯೇನೆಂಬ ವಿಚಾರ ಹತ್ತಿದೆ.

**ಚೇಲಾ**—ಎಂದರೆ, ಸಿಂಹಾಸನಕ್ಕೆ ಚಂಡನೊ ಮುಕುಳನೊ ಎಂಬುದು ನಿರ್ಣಯವಾಗಬೇಕು.

**ಯಾದವ**— ಸರಿ. (ರೂಪಸಿಂಗನು ಬರುವನು.) — ಓಹೊ! ರೂಪಜಿ! ರಾಮ ರಾಮ!

**ಚೇಲಾ**— ಎತ್ತಣಿಂದ ಬರವಾಯಿತು?

**ರೂಪ**—ಅರಮನೆಗೆ ಹೋಗಿದ್ದೆ. ರಾಣಾಜಿಯವರು ತುಂಬ ಕುತೂಹಲದಿಂದಿದ್ದಾರೆ. ಮುಸಲರ ವರ್ತಮಾನವೇನೂ ದೊರೆಯುಲ್ಲಿಲ್ಲವಂತೆ. ಆದುದರಿಂದ ತಮ್ಮ ಆಗಮನ ನಿರೀಕ್ಷಣೆಯಲ್ಲಿದ್ದಾರೆ.

**ಚೇಲಾ**—ಹಾಗಾದರೆ, ಹೋಗೋಣ ನಡೆಯಿರಿ:

(ಮೂವರೂ ಹೋಗುವರು.)



# ೬. ಸತ್ವಪರೀಕ್ಷೆ.

[ರೂಪಸಿಂಗನೂ ಚೇಲಾರಾಮನೂ ಕುಳಿತಿರುವರು.]

**ಚೇಲಾ**— ರೂಪಜಿ! ಇಂದೇನು ತಿಥಿ?

**ರೂಪ**— ಅಷ್ಟಮಿಯಲ್ಲವೇನು?

**ಚೇಲಾ**— ದ್ವಾದಶಿಯಲ್ಲವಷ್ಟೆ?

**ರೂಪ**— ಅದೇಕೆ ತಮಗಾ ಅನುಮಾನ ಬಂತು?

**ಚೇಲಾ**—ಮತ್ತೇನೂ ಅಲ್ಲ. ತಮ್ಮನ್ನು ನೋಡುವಾಗಲೇಕೊ ನನಗೆ ಏಕಾದಶಿಯ ಜ್ಞಾಪಕವಾಯಿತು?

**ರೂಪ**— ಏಕಪ್ಪ ಹಾಗಾಗಬೇಕು?

**ಚೇಲಾ**—ಗೊತ್ತಾಗಲಿಲ್ಲವೆ? ಏಕಾದಶಿ ದಿನ ಜಾಗರ ಮಾಡುವ ಪದ್ಧತಿ. ಮರುದಿನ ಕೊಂಚ ಕಣ್ಣಾಲಸ್ಯವಾಗುತಿದ್ದು ಉತ್ಸಾಹಶೂನ್ಯರಾಗುವುದು ಸಹಜ!

**ರೂಪ**—ಏಕೆ? ನಾನು ನಿನ್ನೆ ರಾತ್ರೆ ಜಾಗರ ಮಾಡಿದವನಂತೆ ಕಾಣಿಸುತ್ತೇನೇನು?

**ಚೇಲಾ**—ಇಲ್ಲವಾದರೆ ಆಗಸಿಂದಲೇನೊ ಯೋಚಿಸುತ್ತ ಬೆಪ್ಪರಂತೆ ಕುಳಿತಿರುವಿರಲ್ಲ? ದೇವರು ಕೊಟ್ಟ ನಾಲಗೆಯನ್ನಾದರೂ ಒಂದಿಷ್ಟು ಚೆನ್ನಾಗಿ ಉಪಯೋಗಿಸಬಾರದೆ?

**ರೂಪ**—ಅದು ಬ್ರಾಹ್ಮಣರ ಕರ್ತವ್ಯವೆಂದೆಂದುಕೊಂಡಿದ್ದೆನು. ಕ್ಷತ್ರಿಯರಿಗೆ ಕೈಯೆ ಮುಂದಾಗಿರಬೇಕು.

**ಚೇಲಾ**—ಆದರೆ ರಾಜನೀತಿಯೇನು? ಸಾಮದಿಂದ ಸಾಧಿಸಲಾಗದೆ ಹೋದಲ್ಲಿ ಮಾತ್ರ ದಂಡದಿಂದ ಖಂಡಿಸಬೇಕು. ಸಾಮಕ್ಕಾದರೆ ನಾಲಗೆಯಲ್ಲದೆ ಕೈಯಿಂದೇನಾದೀತು?

**ರೂಪ**—ಆದರೆ 'ಮೌನಸ್ಯ ಕಲಹಂ ನಾಸ್ತಿ'. ನಾಲಗೆಯನ್ನು ವಿಶೇಷ ವರ್ತಿಸಲು ಬಿಟ್ಟರೆ ಕಲಹಕ್ಕೆ ಮಿತಿಯಿರದು.

ಚೇಲಾ—ನಿಜ ನಿಜ. ಆದುದರಿಂದ ನಾಲಗೆಯನ್ನು ಅಂಕೆಯಲ್ಲಿಟ್ಟು ಕೊಂಡಿದ್ದರೆ ಆತಂಕವೇನು? ಜಯಮಲ್ಲರು ಬಂದರು; ಅವರನ್ನು ಕೇಳೋಣ. (ಜಯನೂ ಯಾದವನೂ ಬರುವರು.)

ಜಯ—ನನ್ನನ್ನು ಕೇಳುವುದಕ್ಕೆ ಮೊದಲೆ ಹೇಳಿಬಿಡುತ್ತೇನೆ. ನಾಲಗೆಯಿಂದ ಹೇಳಿ ತೀರದಷ್ಟು ಅನರ್ಥಗಳುಂಟಾಗುತ್ತಿವೆ. ಆದುದರಿಂದ ಅದನ್ನು ಕೊಯಿದು ಬಿಡುವುದೆ ಉತ್ತಮ ಪಕ್ಷ! ಹೇಗೆ ಯಾದವಜಿ!

ಯಾದವ—ಅದೆಲ್ಲವೂ ಸರಿ. ಆದರೆ—

ಚೇಲಾ—ಆದರೇನು? ಜಯಮಲ್ಲರು ಹೇಳಿದುದು ಸರಿ. ಊಟದ ಕಾಟ ತಪ್ಪುವುದು! ಮಾತಿನ ಮಾಟ ಹೋಗುವುದು!

ಯಾದವ—ಜೀವದ ಹಂಗು?

ಚೇಲಾ—ಭಂಗವಾಗದಿರುತ್ತದೇನು?

ರೂಪ—ಸರಿ ಸರಿ. ಆದರೆ ನಮ್ಮ ಜಯಮಲ್ಲರು ನಾಲಗೆಯ ಮೇಲೆ ಅಷ್ಟೊಂದು ಕೋಪಿಸಿಕೊಂಡರೇಕೊ ಗೊತ್ತಾಗಿಲ್ಲ.

ಜಯ—ಅಂಗೈ ನೋಡುವುದಕ್ಕೆ ಕನ್ನಡಿ ಬೇಕೇನು? ನಮ್ಮ ಇಂದಿನ ಕಾರ್ಯವೇನು? ಚಂಡಾಜಿಯು ಅಂದು ಹಿಂದುಮುಂದು ಯೋಚಿಸದೆ ಆಡಿದ ನುಡಿಯ ಪರಿಣಾಮವು ಇಂದು ನಿರ್ಣಯವಾಗುವುದಲ್ಲವೆ? ಎಲ್ಲಕ್ಕೂ ಆ ಹಾಳು ನಾಲಗೆಯೆ ಕಾರಣ!

[ಚಂಡನೂ ಲಾಖನೂ ಬರುವರು.]

ಲಾಖಾ—ಯಾದವ! ನಾವಕಾಶವೇತಕ್ಕೆ?

ಯಾದವ—ಈಗ ಅದಿಲಶಹನು ಗಯಾಕ್ಷೇತ್ರಕ್ಕೆ ಭಂಗ ತರುವುದರಲ್ಲಿರುವನಷ್ಟೆ? ಆತನನ್ನು ಮುರಿಯುವುದಕ್ಕೆ ಏನು ಮಾಡಬೇಕೆಂದು ಯೋಚಿಸಬೇಕಾಗಿದೆ.

ಲಾಖಾ—ಅದಕ್ಕಿನ್ನೇನು ಯೋಚನೆ? ನಾನೆ ಹೋಗುವುದೆಂದು ಸಂಕಲ್ಪವಾಗಿದೆಯಷ್ಟೆ?

**ಚಂಡ**—ಇಂತಹ ಅಲ್ಪವಾದ ಕಾರ್ಯಕ್ಕೆ ರಾಣಾಜಿಯವರು ಸ್ವತಃ ಹೋಗ ಬೇಕಾದ ಆವಶ್ಯಕವಿಲ್ಲ. ಉಗುರಿನಿಂದಾಗುವ ಕಾರ್ಯಕ್ಕೆ ಕೊಡಲಿಯೇತಕ್ಕೆ? ಅದರಲ್ಲಿಯೂ ಈ ಮುಸಲರ ಬಲವನ್ನು ನಾವು ಮೊದಲೆ ಕಂಡಿಲ್ಲವೆ? ಎಷ್ಟೊ ತಡವೆ ರಣಕ್ಕೆ ಬೆನ್ನುಗೊಟ್ಟು ಓಡಿಹೋದುದು ನಮ್ಮ ಅನುಭವಕ್ಕೆ ಬಂದಿದೆ.

**ಲಾಖಾ**—ಆದರೆ ಅದೆಲ್ಲವೂ ಮೊದಲಿಗಾಯಿತು. ಈಗ ಬಂದವನು ಅದಿಲಶಹನಂತೆ. ತುಂಬ ಹಠವಾದಿ; ಹಿಡಿದ ಕಾರ್ಯವನ್ನೆಂದೂ ಬಿಡುವವನಲ್ಲ. ಆದುದರಿಂದ ನಾವು ತುಂಬ ಜಾಗರೂಕರಾಗಿರ ಬೇಕು.

**ಚೇಲಾ**—ಅದೇನೊ ಸಿಶ್ಚಯ. ಆತನ ಸೇನೆ ಕೂಡ ಬಲು ಪ್ರಶಸ್ತ ವಾಗಿದೆಯಂತೆ. ರಣಪಾಂಡಿತ್ಯವಿರುವ ಸೇನಾ ನಾಯಕರು ಹಲವರಿರುವರಂತೆ.

**ಜಯ**—ಇದು ತನಕ ಬಂದವರು ಹಾದಿಹೋಕರನ್ನು ಕೂಡ ಹಿಡಿದು ಸೇನೆಗೆ ಸೇರಿಸಿಕೊಂಡಿರುವರು. ಈತನು ಮಾತ್ರ ಹಾಗೆ ಮಾಡಿಲ್ಲವಂತೆ.

**ಯಾದವ**—ಹಣಕ್ಕೆ ಆಸೆಬಿದ್ದು ಕಾದಾಡುವ ದಂಡು ಈತನಲ್ಲಿಲ್ಲವಂತೆ. ದ್ರವ್ಯದಿಂದ ಕಾರ್ಯಸಾಧನವಾಗುವ ಹಾಗಿರುತಿದ್ದರೆ, ಎಲ್ಲವನ್ನೂ ಸುಲಿದುಕೊಂಡು ಆಗಲೆ ಓಡಿಹೋಗಿ ಬಿಡುತಿದ್ದರು.

**ಚೇಲಾ**—ಈ ಯುದ್ಧವು ಲಾಭಕ್ಕಲ್ಲ—ಜಾತಿವಾತ್ಸಲ್ಯಕ್ಕೆ. ಗಯಾ ಕ್ಷೇತ್ರವನ್ನು ಹೊಲಸು ಮಾಡಬೇಕೆಂದಲ್ಲದೆ ಮತ್ತೆ ಬೇರೇನೂ ಇಲ್ಲ. ಅದಿಲನಿಗೆ ಹಿಂದೂಗಳನ್ನು ಕಂಡರಾಗದಂತೆ.

**ಯಾದವ**—ಹಾಗೆನ್ನುವಾಗ ಈ ಯುದ್ಧವು ಕೇವಲ ಹಿಂದೂಗಳನ್ನು ಕೆಣಕುವುದಕ್ಕಲ್ಲದೆ ಮತ್ತೇತಕ್ಕೂ ಅಲ್ಲ.

**ಚಂಡ**—ಆದುದರಿಂದಲೇ ನಮ್ಮನ್ನು ಕಂಡರೆ ಅವರು ಓಡಿಹೋಗದೆ ಇರರು.

**ಲಾಖಾ**—ಚಂಡಾ! ಅವರು ಮತವನ್ನು ಕಟ್ಟಿಕೊಂಡು ಕಾದಾಡುವುದಕ್ಕೆ ತೊಡಗಿದರೆಂದರೆ ಪ್ರಾಣ ಹೋಗುವ ತನಕವೂ ಹಿಂದೆಗೆಯುವರಲ್ಲ.

ಆದುದರಿಂದ ಈಗಿನ ಯುದ್ಧದಲ್ಲಿ ಜಯಾಪಜಯಗಳು ಕೇವಲ ಈಶ್ವರಾಧೀನ.

**ಚಂಡ**—ಹೇಗೂ ಇರಲಿ. ಅಪ್ಪಾಜಿ! ನನ್ನನ್ನು ಕಳುಹೋಣಾಗಲಿ. ಚೇಲಾರಾಮನಿದ್ದಾನೆ; ರಾಠೋರರಿದ್ದಾರೆ; ಜಯಿಸಲವಿಾರಿ ನವರು ಬಂದಾರು.

**ಲಾಖಾ**—ಅದೆಲ್ಲವೂ ಸರಿ. ಆದರೆ ನನ್ನ ಸಂಕಲ್ಪ ಬೇರೆ ವ್ಯತ್ಯಸ್ತವಾಗ ಲಾರದು.

**ಯಾದವ**—ಚಂಡಾಜಿ! ರಣದಲ್ಲಿ ಪರಾಜಿತರಾಗಿ ಹಿಂದಕ್ಕೆ ಬರುವುದೆಂದರೆ ಸಿಸೋದಿಯರಿಗೆ ಮರಣಕ್ಕೆ ಸಮಾನ. ಶತ್ರುವನ್ನು ಜಯಿಸ ಬೇಕು, ಇಲ್ಲವೆ ಪ್ರಾಣವನ್ನು ನೀಗಬೇಕು. ಈಗಿನ ಅದಿಲ ಶಹನು ಸಾಮಾನ್ಯನಲ್ಲವಾದುದರಿಂದ ಪ್ರಾಣವನ್ನೆ ನೀಗ ಬೇಕಾದ ಸಂಭವ ಬಂದರೂ ಬರಬಹುದು. ಅದಕ್ಕಾಗಿಯೆ ರಾಣಾಜಿಯವರು ತಾವೆ ಹೊರಡಲು ಸಂಕಲ್ಪಿಸಿರುವರು.

**ಚೇಲಾ**—ಚಂಡಾಜಿ! ನಿನಗಿನ್ನೂ ಯೌವನಾವಸ್ಥೆ. ಮೇವಾರವನ್ನು ಕಾಪಾಡಿಕೊಳ್ಳುವ ಭಾರವು ಇನ್ನು ನಿನ್ನದು. ರಾಣಾಜಿ ಯವರ ಕಾಲ ದಾಟಿತು. ಆದುದರಿಂದ ತಮ್ಮ ಭಾರವನ್ನು ನಿನ್ನ ಮೇಲಿರಿಸಿ ತಾವೆ ಸಮುದಕ್ಕನುವಾಗುತ್ತಾರೆ.

**ರೂಪ**—ಸರಿ ಸರಿ ಚಂಡಾಜಿ! ಇದಕ್ಕೆ ಪ್ರತಿ ಹೇಳಬೇಡ. ಮೇವಾ ರದ ಸಲುವಾಗಿಯಾದರೂ ಒಪ್ಪಿಕೊ.

**ಚಂಡ**—ರೂಪಜಿ! ಹೇಗೆ ಒಪ್ಪಿಕೊಳ್ಳಲಿ? ಮೇವಾರಕ್ಕೆ ಬೇಕಾದರೆ, ನನಗಿಂತಲೂ ಅಧಿಕರಾದವರು ಸಾಕಷ್ಟು ಮಂದಿ ಸಿಕ್ಕರೆ?

**ಯಾದವ**—ಸಿಕ್ಕಲಿ, ಸಿಕ್ಕದಿರಲಿ! ಆ ವಿಚಾರ ನಮಗಾವಶ್ಯಕವಿಲ್ಲ. ಪ್ರಕೃತ ನಿನ್ನಂತಹ ಸ್ವಾಮಿನಿಷ್ಠರೂ ಸ್ವಾರ್ಥತ್ಯಾಗಿಗಳೂ ಕೇವಲ ವಿರಳ. ಆದುದರಿಂದ ರಾಣಾಜಿಯವರ ಮಾತಿನಂತೆ ವರ್ತಿಸು ವುದೆ ಉಚಿತ.

**ಚೇಲಾ**—ಯುದ್ಧವೆಂಬುದು ಒಂದು ಕಷ್ಟವೆಂದು ಭಾವಿಸಿರುವೆಯಾ? ವಿನೋದವಲ್ಲವೆ?

**ಚಂಡ**—ವಿನೋದವಾದರೂ ವೇದನಾಯುಕ್ತವಾಗಿರುವುದು. ಮಾತಾ ಪಿತೃಗಳಿಗೆ ಸುಖಪ್ರದಾಯಕನೆ ತನಯನು.

**ಚೇಲಾ**—ಆದುದರಿಂದಲೆ ನಿನ್ನ ಜನಕನಿಗೆ ವಿನೋದವು ಒದಗುವಂತೆ ಅನುವಾದೆಯೆಂದರೆ ಪಿತೃವಾತ್ಸಲ್ಯವು ಪ್ರಕಟವಾದಂತಾಗುವುದು. ಇದರಲ್ಲಿ ವೇದನೆಗೀದನೆ ಏನೂ ಇರದು. ಒಂದು ವೇಳೆ ಅನಿವಾರ್ಯವಾದ ಪ್ರಸಂಗ ಬಂತೆಂದರೂ ರಜಪೂತರಿಗೆ ರಣ ರಂಗದಲ್ಲಿ ಪ್ರಾಣವನ್ನು ನೀಗುವುದಕ್ಕಿಂತಲೂ ಹಿತಕರವಾದುದು ಬೇರೊಂದಿರದು.

**ಲಾಖಾ**—ಚಂಡಾ! ಇವರೆಲ್ಲರೂ ತುಂಬ ವಿಚಕ್ಷಣರು. ಅವರ ಮಾತು ಗಳಲ್ಲಿ ವಿಶ್ವಾಸವಿಡುವುದು ವಿಹಿತ. ಅದೂ ಅಲ್ಲದೆ ಇನ್ನು ನನ್ನ ಬಾಳು ಕೊನೆಗಂಡಂತೆಯೆ ಸರಿ. ಸಾರವಿಲ್ಲದ ದೀಪದಂತೆ ಉತ್ಸಾಹವು ಕುಗ್ಗಿಹೋಗುವ ಕಾಲ ಬಂದಿದೆ. ಈಗ ಸಮರ್ಥ ನಾದ ನೀನು ರಾಜ್ಯಭಾರವನ್ನು ವಹಿಸಿದೆಯೆಂದರೆ ನಿನ್ನ ಕರ್ತ ವ್ಯವು ಸಮಾಪ್ತಿಯಾದಂತಾಗುವುದು.

**ಚಂಡ**—ಅಪ್ಪಾಜಿ! ರಾಜ್ಯಕ್ಕೆ ಅಧಿಕಾರಿಯು ಮುಕುಲನೆಂಬುದನ್ನು ಮರೆತಿರೆಂದು ಕಾಣುತ್ತಿದೆ.

**ಲಾಖಾ**—ಅದು ಹೋಗಲಿ. ಅಂದು ಹುಡುಗಾಟಿಕೆಯಿಂದ ಆಡಿದ ಮಾತುಗಳನ್ನು ಕಟ್ಟಿಕೊಂಡು ಈಗೇನು ಮಾಡುವುದಕ್ಕಿದೆ?

**ಚಂಡ**—ಅದು ಹುಡುಗಾಟಿಕೆಯ ಮಾತೆಂದು ಹೇಳುವವರಾರು? ಯಥಾರ್ಥವಾಗಿಯೂ ಮಾಡಿದ ಪ್ರತಿಜ್ಞೆ.

(ಮುಕುಳನೊಡನೆ ಹಂಸಿಯು ಪ್ರವೇಶಿಸುವಳು. ಎಲ್ಲರೂ ಮರ್ಯಾದೆ ಮಾಡುವರು.)

ಹಂಸಿ--ಚಂಡಾ!

**ಚಂಡ**—ಮಾತುಶ್ರೀ!

ಹಂಸಿ—ನೀನು ಪ್ರತಿಜ್ಞೆ ಮಾಡಿದುದು ಯಥಾರ್ಥವಾಗಿಯೆ ಆಗಿರ ಬಹುದು. ಆದರೆ ವಿತಕ್ಕೋಸ್ಕರ ಮಾಡಿದೆ? ನನ್ನ ಮನ ಸ್ಸಂತೋಷಕ್ಕಾಗಿ! ನನ್ನ ಆಶಾಪೂರ್ತಿಗಾಗಿ!

ಚಂಡ— ಅಷ್ಟು ಮಾತ್ರವೆಯಲ್ಲ. ರಾಜ್ಯಲಕ್ಷ್ಮಿಯು ನಿನ್ನೊ ದಿಯಾ ಗೃಹವನ್ನು ಪವಿತ್ರಮಾಡಲೆಂದು!

ಹಂಸಿ—ಆಗಲಿ. ಆದರೆ ನಿನ್ನ ಪ್ರತಿಜ್ಞೆಗೂ ನಮ್ಮ ವಿವಾಹಕ್ಕೂ ಸಂಬಂಧವೇನು? ಶ್ರೀಫಲ ಕಳುಹಿದುದರ ಅರ್ಥವೇನು? ರಾಜ್ಯ ಕೊಡ ಬೇಕೆಂದಲ್ಲವಷ್ಟೆ?

ಚಂಡ—ಆದರೆ ರಾಮಸಿಂಗಜೆಯವರು –

ಹಂಸಿ—ಅವರ ಮಾತು ಹಾಗಿರಲಿ! ರಾಜ್ಯಕೊಡಬೇಕೆಂದು ಅಪ್ಪಾಜಿ ಯವರೇನಾದರೂ ಕೇಳಿದರೆ? ನಾನು ಕೇಳಿದೆನೆ?

ಯಾದವ—ಸರಿ. ಚಂಡಾಜಿ! ಏತಕ್ಕಾಗಿ ಮೌನವಾಗಿರುವೆ? ರಾಜ್ಞಿ ಯವರು ಕೇಳುವುದು ಅಸಂಗತವಾಗಿಲ್ಲ.

ಚಂಡ— ಹೇಗೆ ತಾನೆ ಅಸಂಗತವಾಗಿದ್ದೀತು?

ಜಯ—ಹೆಚ್ಚೇಕೆ? ಸಿಂಹಾಸನವನ್ನು ಸ್ವೀಕರಿಸಿದರಾಗದೆ?

ಚಂಡ—ಪ್ರತಿಜ್ಞೆಗೆ ಭಂಗ ಬರುವುದು.

ಹಂಸಿ—ಹಾಗೇನೊ? ನೀವೆಲ್ಲರೂ ರಾಜನೀತಿ ವಿಶಾರದರು. ನೀವೆ ಯೋಚಿಸಿ ನೋಡಿರಿ; ಪೂರ್ವೋತ್ತರ ವಿಚಾರವಿಲ್ಲದೆ ಆಡಿದ ಮಾತು ಹೇಗೆ ತಾನೆ ಪ್ರತಿಜ್ಞೆಯಾದೀತು?

ಚಂಡ—ಅದು ಹೇಗೂ ಇರಲಿ. ನಾನು ದತ್ತಾಪಹಾರ ಮಾಡಲಾರೆ.

ಹಂಸಿ—ಆ ಚಿಂತೆ ಕಟ್ಟಿಕೊಳ್ಳಬೇಡ. ನೀನು ರಾಜ್ಯವನ್ನು ನನಗೆ ಕೊಟ್ಟೆ; ನಾನು ನಿನಗೆ ಕೊಟ್ಟು ಬಿಡುತ್ತೇನೆ.

ಲಾಖಾ— ಚಂಡಾ! ಅವಳು ಮನಃಪೂರ್ವಕವಾಗಿಯೂ ಕೊಡುವಾಗ ಏತಕ್ಕಾಗಿ ಪರಿಗ್ರಹಿಸ ಕೂಡದು?

ಯಾದವ—ಅದರಿಂದ ದೋಷ ಲೇಶವೂ ಬಾರದು.

ರೂಪ— ಪೃಥ್ವೀಪಾಲನೆಯು ಪಾರ್ಥಿವರ ಕರ್ತವ್ಯ.

ಜಯ—ಅದಲ್ಲದೆ ಗುರುವಚನವನ್ನು ಮೀರಬಾರದು.

ಚೇಲಾ— ಜಾರಿ ಬಿದ್ದರೆ ಎದ್ದುಕೊಳ್ಳುವುದು ಸಜ್ಜನರಿಗೆ ಸಾಧು.

**ಹಂಸಿ**—ಚಂಡಾಜಿ! ಎಲ್ಲರೂ ಏನು ಹೇಳುತ್ತಾರೆ? ನೋಡು. ನಾನೇನಾದರೂ ಅರೆಮನಸ್ಸಿನಿಂದ ಆಡಿದ ಮಾತಲ್ಲ. ನೀನೆ ರಾಜನಾಗು. ನನಗದರಿಂದ ತಿಲಮಾತ್ರವೂ ಅಸಂತುಷ್ಟಿಯಾಗದು.

**ಯಾದವ**—ರಾಜ್ಞಿ! ಚಂಡಾಜಿಯನ್ನು ನೀನು ಅರಿಯದವಳಲ್ಲ. ನಿನ್ನ ಮನೋಭಾವವನ್ನು ಸ್ಪಷ್ಟವಾಗಿ ಹೇಳಿದ ವಿನಾ ಆತನು ಯಾವುದಕ್ಕೂ ಒಪ್ಪನು. ನೀನೇತಕ್ಕಾಗಿ ನಿನ್ನ ಮಗನಾದ ಮುಕುಲನ ಅವನತಿಯನ್ನು ಬಯಸುವೆ?

**ಹಂಸಿ**—ಯಾದವಾ! ಅದರಿಂದ ಅವನತಿಯೆಂದು ನಾನೆಣಿಸುವುದಿಲ್ಲ. ರಾಜ್ಯಕ್ಕೆ ಅಧಿಕಾರಿ ಹಿರಿಯ ಮಗನು; ಕಿರಿಯನಿಗೆ ಕೊಡಿಸಲು ಬಯಸಿದೆನೆಂದರೆ ನಾನು ಕಲಿಯುಗದ ಕೇಕಯಿಯಾಗೆನೆ?

**ಚಂಡ**—ಮಾತುಶ್ರೀ! ನೀನಂತಹ ಯೋಚನೆಯನ್ನು ಹಚ್ಚಿಕೊಳ್ಳಬೇಡ. ನಿನಗದರಿಂದ ಅಪಕೀರ್ತಿ ಎಂದಿಗೂ ಬಾರದು, ನಾನು ರಾಮನಂತಾಗುವುದಿಲ್ಲ; ಭೀಷ್ಮನಂತೆ ಮುಕುಲನಿಗೆ ಸಹಕಾರಿಯಾಗಿಯೆ ಇರುತ್ತೇನೆ!

**ಹಂಸಿ**—ಅದೂ ಅಲ್ಲದೆ ನೀನು ವಿವಾಹಮಾಡಿಕೊಂಡರೆ—

**ಚಂಡ**—ಮಾತುಶ್ರೀ! ಹಲವು ಮಾತುಗಳಿಂದೇನು ಪ್ರಯೋಜನ? ಆಡಿದ ನುಡಿ ಎಂದಿಗೂ ಹಿಂದಕ್ಕೆ ಬಾರದು. ನನಗೆ ಕ್ಷಿತಿಯೂ ಬೇಡ ಸತಿಯೂ ಬೇಡ!

**ಚೇಲಾ**—ಚಂಡಾಜಿ! ನಿನ್ನಂತೆಯೆ ಎಲ್ಲರೂ ವರ್ತಿಸಿದರೆಂದರೆ ಪ್ರಪಂಚದ ಉದ್ದೇಶವೆ ಕೊನೆಗಾಣದು. ವಿಧಾತನ ಸೃಷ್ಟಿಯ ಪ್ರತಿಯೊಂದು ಅಂಶಕ್ಕೂ ತಕ್ಕ ಕರ್ತವ್ಯಗಳಿವೆ. ಮನುಷ್ಯನಾದವನಿಗೆ ಹೇಳಿಸಿದ ಅವಸ್ಥೆಗಳು ಬಂದೆ ಬರಬೇಕು. ಹೀಗಿರುವಾಗ ವಿಧಿಯ ಸೂತ್ರಗಳಿಗೆ ವಿರೋಧವಾದ ವರ್ತನೆಯು ಕೇವಲ ವರ್ಜ್ಯವಲ್ಲವೆ? ಹೆಂಡತಿಮಕ್ಕಳು, ಮನೆಮಾರು, ಇವೆಲ್ಲವೂ ಮನುಷ್ಯನಿಗೆ ಮಾನ್ಯವು. ಆಯಾ ಆಶ್ರಮದ ಆಚರಣೆಗೆ ಆಸ್ಪದ ಕೊಡದಿರುವುದು ಅವಿವೇಕಿಗಳ ಲಕ್ಷಣ. ಆದುದರಿಂದ ರಾಜ್ಞಿಯವರ ಆಜ್ಞೆಯನ್ನು ಅನುವರ್ತಿಸು.

ಚಂಡ— ಅಹುದು. ಆದರೆ ಧರ್ಮವನ್ನತಿಕ್ರಮಿಸುವುದು ನನ್ನಿಂದಾಗದು.

ರೂಪ—ಆಗಲಿ. ಕ್ಷಾತ್ರಧರ್ಮವನ್ನವಲಂಬಿಸು; ರಾಜ್ಯಭಾರ ಮಾಡು!

ಚಂಡ—ಹೇಗಾದೀತು? ಮಾತು ಮರೆಯುವುದೆಂದರೆ ಮರಣಕ್ಕೆ ಸಮಾನ.

ಹಂಸಿ—ಚಿಂತಿಲ್ಲ. ನೀನು ಹಿಡಿದ ಹಟವನ್ನು ಇನ್ನೂ ಬಿಡಲಿಲ್ಲ. ಇದೊ ಮುಕುಲನು ಇನ್ನೂ ಹಸುಗೂಸು ತಾನೆ? ಆತನು ದೊಡ್ಡವನಾಗುವ ತನಕವಾದರೂ ನೀನು ರಾಜನಾಗು.

ಯಾದವ—ಆದಾಗ ಬಹುದು. ನಿನ್ನ ಮಾತೂ ಸಲ್ಲುವುದು, ರಾಣಿಯ ಋಣವೂ ತೀರುವುದು!

ಚೇಲಾ—ಬಲು ಚೆಲುವ ಯೋಚನೆ! ಧರ್ಮಕ್ಕೂ ದೋಷವಿಲ್ಲ, ಕರ್ಮಕ್ಕೂ ಕೊರತೆಯಿಲ್ಲ!

ಲಾಖಾ— ಇದಕ್ಕಾದರೂ ಒಪ್ಪ ಬಹುದೆಂದು ಕಾಣುತ್ತಿದೆ.

ಹಂಸಿ- ಅದೊ! ಗುರ್ವಾಜ್ಞೆ! ಈಗೇನು ಹೇಳುವೆ?

ಚಂಡ—ಮಾತಾಜಿ! ನೀನು ಮಾನವಿಯಂತೆ ನನಗೆ ಕಾಣಿಸುವುದಿಲ್ಲ. ಸಾಕ್ಷಾತ್ ಅಂಬಾಭವಾನಿಯೆ ಈ ರೂಪದಿಂದ ಅವತರಿಸಿರಬೇಕು. ಸಿಸೋದಿಯಾ ವಂಶವನ್ನು ಪವಿತ್ರಮಾಡುವುದಕ್ಕೆಂದು ಬಂದಿರುವೆ! ತಾಯಿಾ! ನನ್ನದೇನು ದೋಷವಿದ್ದರೂ ಕ್ಷಮಿಸೋಣಾಗಲಿ. ಇದೊಂದು ವಿಷಯವನ್ನು ಮಾತ್ರ ಬಿಟ್ಟು ಏನು ಬೇಕಾದರೂ ಹೇಳು. ಆಡಿದ ನುಡಿ ಆಡಿ ಹೋಯಿತು. ಇನ್ನು ಅದರಂತೆ ನಡೆಯುವುದೆ ನನ್ನ ಕರ್ತವ್ಯ. ಆದುದರಿಂದ ಸಿಂಹಾಸನವನ್ನು ಒಂದು ಕ್ಷಣಕ್ಕಾದರೂ ಕೂಡ ಸ್ವೀಕರಿಸಬೇಕೆಂದು ಇನ್ನು ಮುಂದೆ ಹೇಳಬೇಡ. ಯಾದವಸೇನಾ! ಈ ತೇಜಸ್ವಿನಿಯು ಮಮತೆಯಿಂದ, ಸ್ವಾರ್ಥವನ್ನು ತೃಣೀಕರಿಸಿ, ಇಂತಹ ಮಾತುಗಳನ್ನಾಡಿದಳು. ಅಂತೆಯೆ ನೀವು ಕೂಡ ಅಭಿಮಾನದಿಂದಲ್ಲದೆ ಕೇವಲ ವಿವೇಚನೆಯಿಂದ ಇಂತಹ ಮಾತುಗಳನ್ನು ಹೇಳಿರಲಿಕ್ಕಿಲ್ಲ. ಆದುದರಿಂದ ನಾನು ಬೇರೆ, ಮುಕುಲ ಬೇರೆ, ಎಂಬ ಭಾವನೆಯನ್ನು ತಾರದೆ ಮೇವಾರವನ್ನು ಉದ್ಧರಿಸಿರಿ! ಇದೇ ನನ್ನ ಪ್ರಾರ್ಥನೆ.

ಚೇಲಾ—ತಥಾಸ್ತು! ರಾಣಾಜಿ! ಈಗ ಒಂದು ವಿಚಾರ ಮಾತ್ರ ಉಳಿದಿದೆ. ಗಯೆಗೆ ತಾವು ಹೋದಿರೆಂದರೆ, ಚಂಡಾಜಿಯೂ ಹೊರಟನೆಂದರೆ, ರಾಜ್ಯವು ಅರಾಜಕವಾಗುವುದು. ಶತ್ರುಗಳಿಗೆ ತುಂಬ ಆಸ್ಪದ.

ಹಂಸಿ—ಚಂಡಾ! ನಾನಿದು ತನಕ ಹೇಳಿದುದೆಲ್ಲವನ್ನೂ ನಿರಾಕರಿಸಿಬಿಟ್ಟೆ. ಆದರೆ ಇದೊಂದು ಮಾತ್ರ ನಡೆಸಿ ಕೊಡಬೇಕು; ಮುಕುಲನಿಗೆ ರಾಜ್ಯವನ್ನು ಕೊಡಬೇಕೆಂದಿರುವೆ. ಆದರೆ ಆತನಿಗೆ ಅದನ್ನು ವಹಿಸುವ ಸಾಹಸವುಂಟಾಗುವ ತನಕ ಕಾಪಾಡಿ ಕೊಡುವುದು ನಿನ್ನ ಕೈಯಲ್ಲಿದೆ. ಆದುದರಿಂದ ಆತನನ್ನು ಬಿಟ್ಟು ನೀನು ಗಯೆಗೆ ಹೋಗ ಕೂಡದು.

ಲಾಖಾ—ಚಂಡಾ! ಕೇವಲ ನನ್ನ ಅವಿಚಾರವರ್ತನೆಯಿಂದ ನಿನಗಿಂತಹ ಅವಸ್ಥೆಯು ಪ್ರಾಪ್ತವಾಯಿತು. ಪ್ರಾಪಂಚಿಕ ಸುಖಸರ್ವಸ್ವವನ್ನೂ ತ್ಯಜಿಸಿ, ಅಕಾಲಿಕವಾದ ಸನ್ಯಾಸವನ್ನು ಕೈಕೊಂಡೆ. ಆದರೂ ಮೇವಾರದ ಹಿತವನ್ನೆ ಬಯಸುವವನಾದುದರಿಂದ ಈಕೆಯ ಇಷ್ಟವನ್ನು ಈಡೇರಿಸು.

ರೂಪ— ಇದೊಂದು ಮಹತ್ವಾದ ಕಾರ್ಯವಲ್ಲ. ನಿನ್ನ ಭಾಷೆಗೇನೂ ದೂಷಣೆ ಬಾರದು.

ಜಯ—ಏನಿಲ್ಲದಿದ್ದರೂ ದೇಶಹಿತಕ್ಕಾಗಿಯಾದರೂ ಈ ಕಾರ್ಯವನ್ನು ಮಾಡುವುದು ಉಚಿತ.

ಯಾದವ—ಮೊನ್ನೆ ತಾನೆ ಶೋಧಿಸಿದ ರಜತನಿಧಿಯ ಪರಿಪೂರ್ಣ ಪ್ರಯೋಜನವು ರಾಷ್ಟ್ರಕ್ಕೆ ದೊರೆಯಬೇಕಾದರೆ ನಿನ್ನ ಸಾಹಸವಿಲ್ಲದೆ ಸಾಗದು. ದೇಶಹಿತದ ಸಲುವಾಗಿ ನೂತನವಾದ ಹಲವು ಕ್ರಮಗಳನ್ನು ಕಲ್ಪಿಸಿರುವೆ. ಅವೆಲ್ಲವೂ ಸರಿಯಾಗಿ ನಡೆದು ಫಲಕಾರಿಗಳಾಗ ಬೇಕಾದರೆ ನಿನ್ನ ಸಾಧನವೆ ಪ್ರಧಾನ. ಆದುದರಿಂದ ಈಗ ನಿನ್ನ ಶ್ರದ್ಧೆಯು ಕುಗ್ಗಿ ಹೋಯಿತೆಂದರೆ ಎಲ್ಲವೂ ಅಳಿದುಹೋಗಿಬಿಡುವುದು. ರಾಷ್ಟ್ರಸಂಪತ್ತಿಗೆ ತುಂಬ ಕುಂದುಕವುಂಟಾಗ ಬಹುದು.

**ಚೇಲಾ**— ಇನ್ನು ದೇಶದಲ್ಲಿ ಶಾಂತಿ ನೆಲಸುವುದು ಅನುಮಾನ. ಶತ್ರುಗಳು ಹತ್ತು ದಿಕ್ಕಿನಿಂದಲೂ ಮುತ್ತಿಕೊಳ್ಳುವುದರಲ್ಲಿದ್ದಾರೆ. ವಿಶೇಷ ಸೈನ್ಯಸನ್ನಾಹಗಳು ಅವಶ್ಯಕ. ಪ್ರಬಲರಾದ ಶತ್ರುಗಳು ಬಂದು ಬಿಟ್ಟರೆಂದರೆ ಅಬಲೆಯಾದ ಈಕೆಯಿಂದ ಏನು ತಾನೆ ಸಾಧ್ಯ? ಆದುದರಿಂದ, ಚಂಡಾಜಿ! ಚೆನ್ನಾಗಿ ವಿಚಾರಮಾಡಿಕೊ. ಪ್ರಸ್ತುತ ಪ್ರಸಂಗದಲ್ಲಿ ಪ್ರತಿಮಾತು ಪ್ರಯೋಜನಕಾರಿಯಾಗದು.

**ಹಂಸಿ**—ಚಂಡಾಜಿ! ಏನು ಯೋಚಿಸುತ್ತಿರುವೆ? ಇದೊ! ಈ ಕೂಸು ನಿನ್ನ ಮಡಿಲಗೆ! (ಕೊಡುವಳು)—ಇದರ ಶಿಕ್ಷಣರಕ್ಷಣೆಗಳೆಲ್ಲವೂ ನಿನ್ನನ್ನೆ ಸೇರಿವೆ!

**ಚೇಲಾ**—ಚಂಡಾಜಿ! ರಾಣಿ ಹಂಸಾಬಾಯಿಯು ದೇಶವಾತ್ಸಲ್ಯದಿಂದಲೂ ನಿನ್ನ ಮೇಲಿನ ವಿಶ್ವಾಸದಿಂದಲೂ, ತನ್ನ ಆಪ್ತಬಂಧುಗಳನ್ನು ಕೂಡ ಗಣಿಸದೆ, ಕೂಸನ್ನು ನಿನ್ನ ಕೈಗೆ ಕೊಟ್ಟಿರುತ್ತಾಳೆ. ಅಂದು ಭೋಜರಲ್ಲಿ ಜನಿಸಿದರೂ ಯಾದವರನ್ನು ಸಲಹಿದ ದಾಮೋದರನಂತೆ, ಈಕೆಯು ರಾಠೋರರಲ್ಲಿ ಜನಿಸಿ ಸಿಸೋದಿಯರನ್ನು ಬೆಳಗಲು ಬಂದಿರುವ ಭಾರ್ಗವಿಯೆ ಸರಿ! ಈಕೆಯ ಮಾತನ್ನು ಎಂದೂ ನಿರಾಕರಿಸಬೇಡ.

**ಚಂಡ**— ಆಗಲಿ. ನಿನ್ನ ಇಷ್ಟ ಹಾಗಿದ್ದರೆ ನನ್ನದೇನೂ ಆಕ್ಷೇಪಣೆಯಿಲ್ಲ. ಈತನು ಪ್ರಾಯಭರಿತನಾಗುವ ತನಕ ನಾನು ನೋಡಿಕೊಂಡಿರುತ್ತೇನೆ!

**ಹಂಸಿ**—ಆಗಲಿ. ಈಗಲಾದರೂ ನನ್ನ ಮನಸ್ಸಿಗೆ ಕೊಂಚ ಸಮಾಧಾನವಾಯಿತು. ಚಂಡಾಜಿ! ದೇಶವಾತ್ಸಲ್ಯಕ್ಕೂ ಸ್ಥಿರಪ್ರತಿಜ್ಞೆಗೂ ನಿನ್ನ ಹೆಸರು ಆಚಂದ್ರಾರ್ಕವಾಗಿ ನೆಲಸಲಿ!

# ೨. ಕುತಂತ್ರ.

[ತಂಗಿಯ ಮನೆಗೆ ಬಂದಿರುವ ರಾವ್ ಜೋದಾ ಮತ್ತು ರಾಜಮಾನ]

**ಜೋದ**—ಎಂತಹ ಅತ್ಯಾಚಾರ? ಕ್ಷತ್ರಿಯನಾಗಿ ಜನಿಸಿ ಇಂತಹ ದುಷ್ಪ್ರವರ್ತನೆಗೆ ತೊಡಗುವುದೆಂದರೆ ಅರ್ಥವೇನು? ಸಿಸೋದಿಯಾ ವಂಶದ ಲಾಖಾರಾಣರ ಸೀಮಂತ ಪುತ್ರನಂತೆ! ತನಗೆ ರಾಜ್ಯ ಬೇಡವಂತೆ! ನಮ್ಮ ಹಂಸಿಯ ಮಗನಿಗೆ ರಾಜ್ಯವಂತೆ! ಈ ಕುತಂತ್ರಗಳು ಏತಕ್ಕಾಗಿ ಬೇಕಿತ್ತು? ರಾಠೋರರೆಂದರೆ ಕುರಿಗಳೆಂದು ಭಾವಿಸಿರುವನೊ ಏನೊ?

**ರಾಜ**—ಅಣ್ಣಯ್ಯಾ! ಏಸಿದು ಇಷ್ಟು ಆಗ್ರಹ?

**ಜೋದ**—ಮತ್ತೇನು? ನಮ್ಮ ಹಂಸಿಯ ಮಗ ಇನ್ನು ನಿರ್ಗತಿಕನಾದ! ಹಂಸಿ ಭಿಕ್ಷುಕಿಯೆ ಸರಿ!

**ರಾಜ**—ಹಾಗೇನು? ಮುಕುಲನು ಬಾಲ ರಾಣನಲ್ಲವೆ? ಹಂಸಿ ರಾಜಮಾತೆಯಲ್ಲವೆ?

**ಜೋದ**—ಅದೆಲ್ಲವೂ ಬರಿಯ ಬಾಯಿಮಾತು! ಲಾಖಾರಾಣರು ಇರುವಾಗ ಅದೆಲ್ಲವೂ ಸರಿ. ಈಗ ಅವರು ಕಾಲವಾಗಿ ಮೂರು ವರುಷ ಕೂಡ ಆಗಿಲ್ಲ. ಅಷ್ಟು ಬೇಗನೆ ಚಂಡನ ಪುಂಡಾಟಿಕೆ ಕಂಡರೆ ಗೊತ್ತಾಗುವುದಿಲ್ಲವೆ?

**ರಾಜ**—ರಾಜ್ಯದ ವ್ಯವಸ್ಥೆ ಚೆನ್ನಾಗಿರುವುದಷ್ಟೆ!

**ಜೋದ**—ನಾನು ಕೂಡ ಅದೇ ಹೇಳುವುದು! ಈ ಮೇವಾರವೆಲ್ಲವೂ ಚಂಡನ ಪಕ್ಷ. ನಮ್ಮ ಮುಕುಲನನ್ನು ಕೇಳುವವರೆ ಇಲ್ಲ! ನಾವು ಕೂಡ, ನಮ್ಮ ಹಂಸಿಯ ಮನೆಗೆಂದು ಬಂದರೆ, ಆ ಮೂರ್ಖನ ಮಾತಿನಂತೆ ವರ್ತಿಸಬೇಕಂತೆ! ಹಂಸಿ ಕೂಡ ಆತನ ಆಜ್ಞಾಧಾರಿಣಿ!

**ರಾಜ**—ಅದೇನೊ ನಿಜ! ಏನು ಕೆಲಸ ಮಾಡಬೇಕಾದರೂ ಮೊದಲು ಆತನ ಅನುಮತಿಯನ್ನು ಪಡೆಯಬೇಕು.

ಜೋದ—ಅಲ್ಲವೆ ಮತ್ತೆ? ರಾಠೋರರೆಂದರೆ ಕಸಕ್ಕೆ ಸಮಾನ! ಈ ಧೂರ್ತನನ್ನು ಮೇವಾರದಿಂದ ಹೊರಕ್ಕೆ ಅಟ್ಟಿ ಬಿಡುವುದು ಎಷ್ಟರ ಮಟ್ಟಿನ ಕೆಲಸ!

ರಾಜ—ಎಲ್ಲಕ್ಕೂ ನಮ್ಮ ಹಂಸಿಯೆ ಕಾರಣ! ಹಾದಿಯಲ್ಲಿ ಹೋಗುತಿದ್ದ ಮಾರಿಯನ್ನು ಬೇಕುಬೇಕೆಂತಲೆ ಮನೆಗೆ ತಂದು ಹಾಕಿಕೊಂಡುದಲ್ಲವೆ? ನಾವೆಲ್ಲರಿದ್ದೇವೆ ; ಚಂಡನಿಗೆ ಅಧಿಕಾರ ಕೊಡಬೇಕಾದರೆ, ಒಂದು ಮಾತು ನಮ್ಮನ್ನು ಕೇಳಬೇಡವೆ? ಅದರ ಫಲ ಈಗ ಅನುಭವಿಸಲಿ!

ಜೋದ—ಛಿ! ಹಾಗಲ್ಲ. ಅದರ ಉಪಹತಿ ನಮಗೆ ಕೂಡ ತಟ್ಟುವುದಿಲ್ಲವೇನು? ಮಾರ್ವಾಡ ಮೇವಾಡಗಳೆಂದರೆ ಮುಂಚಿನಿಂದಲೂ ಅನ್ಯೋನ್ಯವಾಗಿದ್ದ ರಾಜ್ಯಗಳು. ಮುಂದಕ್ಕೆ ಕೂಡ ಹಾಗೆಯೆ ನಡಿಯ ಬೇಕು!

ರಾಜ—ಅದಕ್ಕೇನು? ನಾವು ಅವರ ತಳ್ಳಿಗೆ ಹೋಗದಿದ್ದರಾಯಿತು!

ಜೋದ—ರಾಜೂ! ನಿನಗಿನ್ನೂ ತಿಳಿಯದು. ಈಗ ಮುಕುಲನಿಗೆ ನಾವೆ ರಕ್ಷಕರಾಗಿ ಬಿಟ್ಟರೆ, ಮುಂದಕ್ಕೆ ನಮ್ಮೆರಡು ರಾಷ್ಟ್ರಗಳೂ ಒಂದೆ ಅರಸುತನದಲ್ಲಿ ಮೆರೆಯುವ ಸಂಭವವಿದೆ! ನಮಗೆ ಕೂಡ ತುಂಬ ಗೌರವ! ಯಾವುದಕ್ಕೂ ಆ ಹುಚ್ಚು ಹಂಸಿಯನ್ನು ಮೆತ್ತಗೆ ತಿರುಗಿಸಬೇಕು!

ರಾಜ—ಅದೀಗ ನಿಜ! ಹಾಗೆ ಮಾಡಿದೆವೆಂದರೆ ಚಂಡನನ್ನು ಕಿತ್ತು ಹಾಕಿ ಬಿಡಬಹುದು.

ಜೋದ—ಅಲ್ಲವೆ ಮತ್ತೆ? ಈಗ ಅಪ್ಪಾಜಿಯವರನ್ನು ಕರೆಸೋಣ. ಅವರು ಬಾರದೆ ಒಂದೂ ಸರಿಬೀಳದು!

## ೮. ಮೊಸರಿನಲ್ಲಿ ಕಲ್ಲು.

[ಕಮಲಾವತಿಯು ಮಗುವನ್ನು ಮಲಗಿಸುತ್ತಿರುವಳು.]

ಜೋದ—ಏನೆ ಕಮಲಿ! ಹಂಸಿ ಇಲ್ಲವೇನು?

ಕಮಲಾ—ಇಲ್ಲೆ ಇದ್ದಾರೆ. ಬರುವುದಕ್ಕೆ ಹೇಳುತ್ತೇನೆ. (ಹೋಗುವಳು.)

ರಾಜ—ಅಣ್ಣಯ್ಯಾ! ನಮ್ಮ ಮಾತಿಗೆ ಏನು ಹೇಳುತ್ತಾಳೊ? ಸಿಟ್ಟು ಮಾಡಿದರೆ?

ಜೋದ—ಸಿಟ್ಟು ನಮಗೂ ಬರಲಿಕ್ಕಿಲ್ಲವೇನು? ನೀನು ಸ್ವಲ್ಪ ಸುಮ್ಮ ನಿರು. ನಿನಗೊಂದರ ಯೋಚನೆಯೂ ಬೇಡ. ಇನ್ನು ಮೇವಾರ ನಮ್ಮ ಕೈಯೊಳಗೆ ಬಿತ್ತೆಂತಲೆ ಎಣಿಸಿಕೊ! ಆ ಚಂಡನ ಚಂಡತನವೆಲ್ಲ ಹೊರಕ್ಕೆ ಹಾಕಿ ಬಿಡುತ್ತೇನೆ ನೋಡು!

ಹಂಸಿ—(ಬಂದು)—ಜೋದಾ! ಏನಿದು? ಏನು ವಿಶೇಷ?

ಜೋದ—ವಿಶೇಷವೇನೂ ಇಲ್ಲ. ನಿನ್ನನ್ನು ನೋಡಿಕೊಂಡು ಹೋಗೋಣ ವೆಂದು ಬಂದೆವು.

ಹಂಸಿ—ಆಸ್ಥಾನಕ್ಕೆ ಹೋಗಲಿಲ್ಲವೇನು?

ಜೋದ—ದಿನಾಲೂ ಏತಕ್ಕೆ ಹೋಗಬೇಕು? ಏನಿದೆ ಸೌಭಾಗ್ಯ ಅಲ್ಲಿ?

ಹಂಸಿ—ಎಂದರೆ?

ಜೋದ—ಮತ್ತೇನೂ ಇಲ್ಲ. ಎಷ್ಟಾದರೂ ನಾವು ರಾಠೋರರು? ಸಿಸೋದಿಯರಿಗೆ ಹೇಗೆ ತಾನೆ ಕಾಣಿಸಿಕೊಂಡೇವು?

ಹಂಸಿ—ಏನದು? ಬಾಯಿಬಿಚ್ಚಿ ಹೇಳ ಬಾರದೆ?

ಜೋದ—ಅಮ್ಮಯ್ಯಾ! ನೀನೇನೂ ತಿಳಿಯದವಳಲ್ಲ. ರಾಜನೀತಿ ಕೂಡ ನಿನಗೆ ತಿಳಿದಿರುವ ವಿಷಯವೆ. ಹೀಗಿರುತ್ತ ನಿನ್ನ ಕೂಸಿನ ಪರವಾಗಿ ಕೊಂಚವಾದರೂ ಜಾಗರೂಕತೆ ನೋಡಿ ಕೊಂಡಿರುವುದು ನಿನ್ನ ಕರ್ತವ್ಯವಲ್ಲವೆ? ಈಗ ಚಂಡನು ರಾಜ ಕಾರ್ಯವೆಲ್ಲವನ್ನೂ ಮಾಡುತ್ತಾನಷ್ಟೆ? ಆದರೆ ಆತನ ಕೃತ್ಯಗಳು ನಿನ್ನ ಮೋಕಿಯ ಹಿತಕ್ಕೊ ಅಹಿತಕ್ಕೊ ಎಂಬುದನ್ನು ವಿಚಾರಿಸಿ ಕೊಂಡಿರುವೆಯಾ?

ಹಂಸಿ—ಚಂಡನು ನಮ್ಮ ಮೋಕಿಗೆ ಎಳ್ಳಷ್ಟಾದರೂ ಕೆಡುಕು ಮಾಡಿ ಯಾನೆಂದು ನಾನೆಣಿಸುವುದಿಲ್ಲ!

ರಾಜ—ಹೇಗೆ ತಾನೆ ಎಣಿಸೀಯೆ? ಅಂತಹ ವಿವೇಚನೆಯು ಗೊಡವೆ ಯನ್ನೆ ನೀನು ಹಚ್ಚಿಕೊಂಡಿಲ್ಲ!

ಹಂಸಿ—ಅಲ್ಲವೇನೊ, ರಾಜು! ನಮ್ಮ ಚಂಡನೇನು ಕೆಡುಕು ಮಾಡಿ ದ್ದಾನೆ? ಆತನಿಂದ ಮೋಕಿಗೇನು ಅಪಾಯ? ನೀನೇನಾದರೂ ಕಂಡುಕೊಂಡಿದ್ದಿಯಾ?

ರಾಜ— ಇನ್ನೇನಿದೆಯಮ್ಮ ಕಂಡುಕೊಳ್ಳುವುದಕ್ಕೆ? ಆಸ್ಥಾನಕ್ಕೆ ಒಂದು ದಿನ ಹೋದರೆ ಸಾಕಷ್ಟೆ? ಅಂತೆಯೆ ಕಂಡು ಬರುತ್ತಿದೆ!

ಹಂಸಿ—ಏನು ಕಂಡು ಬರುತ್ತಿದೆ?

ರಾಜ— ಚಂಡನ ಆಡಂಬರ!

ಹಂಸಿ— ಏನು ಆಡಂಬರವೊ! ಅವ್ಯವಸ್ಥೆಯೇನೂ ಇಲ್ಲವಷ್ಟೆ?

ಜೋದ— ನ್ಯಾಯವಾದ ರಾಣನ ಅಧಃಪತನಕ್ಕೆ ಅವಕಾಶ ಮಾಡುತ್ತ ಬಂದರೆ ಅದು ಅವ್ಯವಸ್ಥೆಯಲ್ಲವೇನು? ನಾಲ್ಕು ದಿನ ಹೋಗಲಿ; ಎಲ್ಲವೂ ತಿಳಿದು ಬಂದೀತು!

ಹಂಸಿ—ನೀನೇನು ಹೀಗೆ ಅರೆಮಾತು ಹೇಳುತ್ತಿ? ನಮ್ಮ ಮೋಕಿ ಗೇನಾದರೂ ಗಂಡಾಂತರವಿರುವುದೇನು?

ರಾಜ—ನಮ್ಮನ್ನೇನು ಕೇಳುತ್ತಿ? ನೀನೆ ನೋಡಿಕೊಳ್ಳಬಾರದೆ?

ಜೋದ—ಅಲ್ಲವೆ ಮತ್ತೆ? ಅಂದು ಮೋಕಿಯ ಪರವಾಗಿ ರಾಜಕಾರ್ಯ ಗಳನ್ನು ಯಾರು ನಡಿಸಿಕೊಂಡು ಬರಬೇಕೆಂಬ ಯೋಚನೆ ಬಂದಾಗ, ನಾವು ಯಾರೂ ತಮ್ಮಂತಹ ಸಿಸೋದಿಯಾ ರಾಣಿ ಯವರ ಚಿತ್ತಕ್ಕೆ ಗೋಚಾರವಾಗಲಿಲ್ಲ! ಈಗೇಕೆ ನಮ್ಮನ್ನು ಕೇಳುತ್ತೀರಿ? ಮಹಾರಾಣಿಯವರೆ! ನಿಮ್ಮ ಹಂಗೆ ನಮಗೆ ಬೇಡ! ರಾಜೂ! ಹೋಗೋಣ, ಬಾ!—(ಹೊರಡಲು, ಹಂಸಿಯು ತಡೆಯುವಳು.)

ಹಂಪಿ—ಜೋದರಾ! ರಾಜೂ! ಇದೊ, ನನ್ನ ಮೇಲೆ ಆಣೆಯಿದೆ! ಈಗೇನು ಅಪಾಯವಿದೆ? ಹೇಳಲೆ ಬೇಕು!

ರಾಜ—ಅಕ್ಕಯ್ಯಾ! ಬೇಡ, ನಮ್ಮ ಮಾತು ನಿನಗೇನೂ ರುಚಿಸುವ ಹಾಗಿಲ್ಲ.

ಜೋದ—ಸುಮ್ಮನೆ ನಮಗೇತಕ್ಕೆ ನಿಷ್ಠುರ?

ಹಂಪಿ—ನಿಷ್ಠುರವೇನೂ ಇಲ್ಲ. ಸಂಕೋಚವಿಲ್ಲದೆ ಹೇಳಿರಿ. ಹೇಗಾದರೂ ನಮ್ಮ ಮೋಕಿ ಗಂಡಾಂತರದೊಳಗೆ ಬೀಳದಿದ್ದರೆ ಸರಿ. ನನಗೀಗ ನೀವಲ್ಲದೆ ಮತ್ಯಾರು ಆಧಾರ? ನೀವೆ ಹೀಗೆ ಕೈ ಬಿಟ್ಟರೆ?

ಜೋದ—ಹಾಗಾದರೆ ಕೇಳು! ಚಂಡನನ್ನು ಅಧಿಕಾರದಿಂದ ಕಿತ್ತುಹಾಕ ಬೇಕು!

ಹಂಪಿ—ಏನು? (ತಟ್ಟನೆ ಹಿಂಜರಿಯುವಳು.)

ಜೋದ—ತಾಳು ತಾಳು! ಹಾರಬೇಡ! ಎಲ್ಲವನ್ನೂ ಕೇಳು. ಈಗಿನಂತೆಯೆ ಆತನು ಇನ್ನೂ ಅಧಿಕಾರದಲ್ಲಿದ್ದರೆ, ನಿನಗೆ ಮತ್ತೆ ಮೋಕಿಯ ಆಸೆಯೆ ಬೇಡ!

ಹಂಪಿ—ಹಾಗೆಂದರೇನು?

ರಾಜ—ಅದೂ ಕೂಡ ತಿಳಿಯದೆ? ಈಗ ಚಂಡನು ಮೆಲ್ಲಮೆಲ್ಲಗೆ ಸಮಸ್ತ ಅಧಿಕಾರವನ್ನೂ ಕೈವಶ ಮಾಡಿಕೊಂಡಿದ್ದಾನೆ. ಹೆಸರಿಗೆ ಮಾತ್ರ ಮೋಕಿ ರಾಣನಂತೆ!

ಹಂಪಿ—ಏನಪ್ಪ! ಆತನು ಇದುತನಕ ನನ್ನ ಅನುಮತಿಗೆ ವಿರೋಧವಾಗಿ ಎಂದೂ ನಡೆದವನಲ್ಲ.

ಜೋದ—ಹೇಗೆ ತಾನೆ ನಡೆದಾನು? ಒಂದೆ ಸಲ ಸ್ವಾತಂತ್ರ್ಯವನ್ನು ಪ್ರಕಟಿಸುವುದಕ್ಕಾಗುವುದೆ? ಕ್ರಮೇಣ ಬಲಶಾಲಿಯಾಗಿ ಕೊನೆಗೆ ತಾನೆ ರಾಣನೆನ್ನಿಸಿಕೊಳ್ಳುತ್ತಾನೆ!

ಹಂಪಿ—ಏನಪ್ಪ! ಇಂತಹ ಕುತಂತ್ರವನ್ನು ಮಾಡಿಯಾನೆಂದು ನಾನೆಣಿಸುವುದಿಲ್ಲ.

ರಾಜ— ನಾನು ಹೇಳಲಿಲ್ಲವೆ? ಬರಿಗುಲ್ಲು ಸಿದ್ಧೆಗೇಡು!

ಹಂಸಿ—ನಿಮಗಿಂತಹ ಯೋಚನೆ ಬರುವುಕ್ಕೆ ಕಾರಣವೇನು?

ಜೋದ—ಒಂದಲ್ಲ, ಎರಡಲ್ಲ! ಹಲವಿದೆ! ಪ್ರತಿಯೊಂದು ಶಾಸನಕ್ಕೂ ರಾಣಿಸ ಮುದ್ರೆ ಸಾಲದಂತೆ! ತನ್ನ ಮುದ್ರೆ ಕೂಡ ಆವಶ್ಯಕ ವಂತೆ! ಸಭೆಯಲ್ಲಿ ತಾನೆ ಮುಂದಾಳಂತೆ! ಅದಕ್ಕೆ ತಕ್ಕ ಕುಣಿಯುವ ಮಂತ್ರಿಗಳು ಬೇರೆ!

ರಾಜ—ಮತ್ತೆ ನಿನಗೆ ಕೂಡ ಸ್ವಾತಂತ್ರ್ಯವೆಲ್ಲಿಂದ? ಅರಮನೆ ಬಿಟ್ಟು ಹೊರಕ್ಕೆ ಕಾಲಿಡಬೇಕಾದರೆ ಚಂಡನ ಕಾವಲುಗಾರರು ಬಂದೆ ಬರುತ್ತಾರೆ! ಮೋಕಿಯಂತೂ ಒಂದು ಕ್ಷಣವೂ ಆತನ ಕಣ್ಣು ತಪ್ಪಿರ ಬಾರದಂತೆ!

ಜೋದ— ನಮ್ಮೂರಿಗೆ ಕರೆದುಕೊಂಡು ಹೋಗ ಕೂಡದಂತೆ! ನಾವು ಕೂಡ ತುಂಬ ದೂರದವರಾಗಿ ಬಿಟ್ಟೆವು?

(ಎಲ್ಲವನ್ನೂ ಆಲೈಸಿಕೊಂಡಿದ್ದ ತಾರೆಯು ಮಾತಾಡುವಳು)

ತಾರಾ—ಯುವರಾಜ! ಅದಕ್ಕೆ ಕಾರಣ ಬೇರೆಯೆ ಇರ ಬಹುದು!

ಜೋದ—ಏನು ಕಾರಣ?

ತಾರಾ—ಹೇಳಲೆ ಬೇಕಾದರೆ ಹೇಳುತ್ತೇನೆ.

ಜೋದ—ಹುಂ! ಹೇಳಿಬಿಡು.

ತಾರಾ—ಹಾಗಾದರೆ ಹಂಸಾರಾಣೀ! ನನ್ನದು ಕೂಡ ಒಂದು ಮಾತು ಕೇಳು. ಚಂಡಾಜಿಗೆ ಮೋಕಿಯ ಮೇಲೆ ಎಷ್ಟರ ಮಟ್ಟಿನ ಮಮತೆಯಿದೆಯೆಂಬುದು ನಿನಗೆ ತಿಳಿದಿರುವುದಷ್ಟೆ? ಸವತೀ ಪುತ್ರನೆಂದಾಗಲಿ, ರಾಜ್ಯಾಧಿಕಾರಿಯೆಂದಾಗಲಿ—ತಿಲಮಾತ್ರವೂ ಭೇದ ಭಾವವನ್ನು ತೋರಿಸಿದವನಲ್ಲ! ಹೀಗಿರುತ್ತ ನೀನಿದೊಂದನ್ನೂ ಯೋಚಿಸದೆ, ಬರಿದೆ ಇವರ ಮಾತುಗಳಿಗೆ ಮರುಳಾಗ ಬೇಡ!

ರಾಜ —ಅಪ್ಪ! ಚಂಡನ ಪಕ್ಷಪಾತಿ!

ಜೋದ—ಬಹುಶಃ ಆತನು ಈಕೆಯನ್ನು ಕೈಹಿಡಿಯುವುದಾಗಿ ಮಾತು ಕೊಟ್ಟಿರುವನೊ ಏನೊ!

ತಾರಾ—ಯುವರಾಜ! ನನ್ನೊಡನೆ ಅಂತಹ ಮಾತುಗಳು ನಡೆಯಲಾರವು. ನಿಮ್ಮ ಚರಿತ್ರೆಯು ನನಗೆ ಆದ್ಯಂತವಾಗಿಯೂ ಗೊತ್ತಿದೆ. ನಿಮ್ಮಂತಹ ದುಷ್ಪ್ರವರ್ತಕರ ದುರ್ಬೋಧನೆಯಿಂದ ದುಃಸಹವಾದ ದುಃಖಸಾಗರದಲ್ಲಿ ನಮ್ಮನ್ನೆಲ್ಲ ಅದ್ದಿ ಬಿಡಬೇಕೆಂದು ಭಾವಿಸಿರುವಿರಲ್ಲವೆ? ನೀವು ಮಾರ್ವಾಡದಲ್ಲಿ ಮಾಡಿರುವಂತಹ ಸೌಭಾಗ್ಯವಾದರೂ ಏನಿದೆ? ನಿಮ್ಮಂತಹ ಮದ್ಯಪಾಯಿಗಳ ಸಂಪರ್ಕ ನಮ್ಮ ಮುಕುಲನಿಗೆ ಆವಶ್ಯಕವಿಲ್ಲ. ಸುಮ್ಮನೆ ಅಂಗೈ ತೋರಿಸಿ ಅನಿಷ್ಟ ಅನ್ನಿಸಿಕೊಳ್ಳಬೇಡಿರಿ! ರಾಜ್ಞೀ! ಇವರ ಮಾತುಗಳಿಗೆ ಮರುಳಾಗಬೇಡ. ಚಂಡಾಜಿಯು ಅಚ್ಚ ರಜಪೂತವೀರನು! ಇದು ಮಾತ್ರ ಜ್ಞಾಪಕದಲ್ಲಿರಲಿ!

ಜೋಧ—ಆಹುದು. ಅಚ್ಚ ರಜಪೂತ! ಐಶ್ವರ್ಯ ಕಂಡರೆ ಎಂತಹ ಅಚ್ಚನೂ ಹುಚ್ಚನೆ ಆಗುತ್ತಾನೆ!

ರಣಮಲ್ಲ—(ಪ್ರವೇಶಿಸಿ) ಏನದು ಸಮಾಚಾರ?

ಜೋಧ—ಇದ್ದ ಸಂಗತಿಯನ್ನು ಹಂಸಿಗೆ ತಿಳಿಸಿ ಬಿಟ್ಟೆವು. ಇನ್ನು ಅವಳ ಇಷ್ಟವಿದ್ದಂತೆ ಮಾಡಲಿ!

ರಣ—ಹಂಸೀ! ಏನು ಯೋಚಿಸುತ್ತಿರುವೆ? ಮಗೂ! ತಿಳಿದು ತಿಳಿದು ಯಾರಾದರೂ ಹಾವಿಗೆ ಹಾಲೆರೆದಾರೆ?

ಹಂಸಿ—ಅಪ್ಪಾಜಿ! ನಾನು ಹೆಣ್ಣು ಹೆಂಗುಸು; ಏನು ತಾನೆ ಮಾಡುವುದಕ್ಕಾದೀತು?

ರಣ—ಮೀಸೆಹೊತ್ತ ಗಂಡಸರು ನಾವಿದ್ದೇವೆಯಷ್ಟೆ? ಏನಾಗಬೇಕು? ಹೇಳು!

ಜೋಧ—ಆಗುವುದೇನು? ಚಂಡಾಜಿಯನ್ನು ಅಟ್ಟಿ ಬಿಡಬೇಕು!

ರಣ—ಅದಕ್ಕೇನು ಕಷ್ಟ? ತಾರೆ! ಅವನನ್ನು ಇಲ್ಲಿ ಬರಹೇಳು! (ತಾರೆ ಹೋಗುವಳು.)

ಜೋಧ—ನನಗದೇ ಆಶ್ಚರ್ಯ. ಹಂಸಿ ಇಷ್ಟು ಸುಜ್ಞಳಾಗಿದ್ದರೂ ಮುಳ್ಳನ್ನು ಮೊಳಕೆಯಲ್ಲೆ ಮುರಿಯಲಿಲ್ಲವಲ್ಲ?

ರಣ—ಮೊಳಿಕೆ ಮರವಾದರೇನು? ನಮ್ಮಲ್ಲಿ ಕೊಡಲಿ ಇರಲಾರ ದೇನು? ಹಂಸೀ? ನಿನಗೊಂದರ ಯೋಚನೆಯೂ ಬೇಡ, ತಿಳಿಯಿತೆ?

ಹಂಸಿ—ಯಾದವಸೇನನನ್ನು ಒಂದು ಮಾತು ಕೇಳಬೇಡವೆ?

ರಣ—ನಿನ್ನ ಯಾದವ! ಯಾರವನು? ಮೊನ್ನೆ ಹುಟ್ಟಿದ ಕೂಸು!

ಜೋದ—ಅಹುದು. ಅವರೆಲ್ಲರೂ ಚಂಡನಿಗೆ ಅನುಕೂಲರಾಗಿದ್ದಾರೆ

ರಣ—ಏನೊ? ಯಾದವನೊ ಗೀದವನೊ? ಬೇಕಾದರೆ ತನ್ನ ಹದಿನಾರು ಸಹಸ್ರ ಗೋಪೀಪರಿವಾರ ಸಹಿತ ಬರಲಿ! ಏನೂ ಭಯವಿಲ್ಲ: ಇಷ್ಟವಿದ್ದರೆ ಕೆಲಸಮಾಡಲಿ! ಇಲ್ಲವಾದರೆ ನಡೆಯಲಿ! ಬೇರೆ ಯವರು ಇಲ್ಲವೇನು?

ಹಂಸಿ—ಹಾಗಲ್ಲ. ಚಂಡನು ನಿಜವಾಗಿಯೂ ಮುಕುಲನ ಅಮಂಗಲ ಹಾರೈಸುತ್ತಾನೇನು?

ರಣ—ಹೆಂಗಳು ಬರಿಯ ಮೊದ್ದು ಎಂಬುದು ಇಷ್ಟರಲ್ಲೆ ತಿಳಿಯುತ್ತಿದೆ!

ಜೋದ—ಅಲ್ಲವೆ ಮತ್ತೆ? ಸ್ತ್ರೀಬುದ್ಧಿಃ ಪ್ರಳಯಾಂತಿಕಃ!

ರಣ—ಅಲ್ಲದೆ ಹೋದರೆ ಹೀಗಾಗುತಿತ್ತೆ? ಅದೊ, ಚಂಡನು ಬರುತ್ತಾನೆ.

(ಚಂಡನೂ ಯಾದವನೂ ಬಂದು ನಮಸ್ಕರಿಸಿ, ರಾಣಿಯ ಅವಸರವನ್ನು ನಿರೀಕ್ಷಿಸುವರು ರಾಣಿಯು ಮೌನವಾಗಿರುವಳು.)

ಚಂಡ—ರಾಜ್ಞೀ! ಏತಕ್ಕಾಗಿ ನನ್ನನ್ನು ಕರೆಸೋಣಾಯಿತು?— ಮುಕುಲನೇನಾದರೂ ಚೆನ್ನಾಗಿಲ್ಲವೆ?

ರಣ—ಚಂಡಸಿಂಗ್! ನೀನೀ ಮೂರು ವರುಷಗಳಿಂದ ರಾಜ್ಯಭಾರವನ್ನು ವಹಿಸಿಕೊಂಡು ತುಂಬ ಬಳಲಿರುವೆ. ಈಗ ನಿನಗೆ ಕೊಂಚ ವಿಶ್ರಾಂತಿ ಕೊಡಬೇಕೆಂದು ನಮ್ಮ ಕುಮಾರಿಯ ಯೋಚನೆ!

ಚಂಡ—ರಾಣಾಜಿ! ನನ್ನ ದೇಶದ ಸಲುವಾಗಿ ನಾನೇನಾದರೂ ಮಾಡಿ ದರೆ, ಅದರಿಂದ ನನಗೆ ಆಯಾಸವೆಂಬುದು ಹೇಗುಂಟಾದೀತು?

ಜೋದ—ಅಮ್ಮಯ್ಯಾ! ಕೇಳಿದೆಯಾ ನಿನ್ನ ಚಂಡಾಜಿಯ ಕಾರ್ಯ- ತತ್ಪರತೆ? ಮರಣಾಂತದ ತನಕವೂ ಇದೇ ರೀತಿ ಇದ್ದರೂ, ತನಗೆ ಬೇಸರ ಹುಟ್ಟಲಾರದೆಂದು ಆತನ ಅಭಿಪ್ರಾಯ!

ಯಾದವ—ಯುವರಾಜ! ಚಂಡಾಜಿಯ ಅಭಿಪ್ರಾಯವು ತಾವು ಹೇಳಿದಂತಲ್ಲ. ಎಷ್ಟರ ತನಕ ತನ್ನ ಸೇವೆಯು ಮಾತೃಭೂಮಿಗೆ ಆವಶ್ಯಕವೊ ಅದು ತನಕ ಅವಿಶ್ರಾಂತವಾದ ಶ್ರಮವನ್ನು ವಹಿಸಲು ತಾನು ಸಿದ್ಧನಾಗಿದ್ದಾನೆಂದು ಆತನ ಭಾವ.

ರಣ—ನಾನು ಕೂಡ ಅದೇ ಹೇಳುವುದು. ಮೇವಾರದ ಸಲುವಾಗಿ ಸಮಯ ಬಂದರೆ ರಕ್ತಸ್ರಾವಕ್ಕೂ ಸಿದ್ಧರಾಗಿರುವ ವೀರರ ನೆರವು ಈಗಲಿರುವುದು.

ಯಾದವ—ಎಂದರೆ?

ರಣ—ರಾಜ್ಯಭಾರವನ್ನು ಇತರರು ವಹಿಸಲಿ ಎಂದರ್ಥ!

ಚಂಡ—ಅದಕ್ಕಿಷ್ಟು ಯೋಚನೆಯೇತಕ್ಕೆ? ನಮ್ಮ ಮುಕುಲನು ಕಾರ್ಯನಿರ್ವಾಹವನ್ನು ವಹಿಸುವುದಕ್ಕೆ ಸಮರ್ಥನಾಗುತ್ತಲೆ—

ರಣ—ಅಷ್ಟು ದೀರ್ಘವೇತಕ್ಕೆ? ಬಹುಶಃ ಅಧಿಕಾರದ ಆಸೆ ಪ್ರಬಲವಾಗಿರುವ ಹಾಗೆ ಕಾಣುತ್ತಿದೆ!

ಚಂಡ—ರಾಣಾಜಿ! ಈ ಮಾತನ್ನು ಇತರರು ಯಾರಾದರೂ ಹೇಳಿದ್ದರೆ ಮತ್ತೆ ನೋಡಬಹುದಿತ್ತು!

ರಣ—ಹಂಸೀ! ನೋಡಿದೆಯಾ? ಸರಿಯಾದ ವೀರನನ್ನೆ ಗೊತ್ತು ಮಾಡಿರುವೆ. ಮುಕುಲನಿಗೆ ರಾಜ್ಯ ಕೊಡುವ ಯೋಚನೆ ಈತನಿಗಿರುತ್ತಿದ್ದರೆ ಹೀಗೆನ್ನುತಿದ್ದನೆ?

ಚಂಡ—ಸರಿ! ಕೊನೆಗೆ ಇಷ್ಟಕ್ಕೆ ಬಂತೆ? ಚಿಕ್ಕಮ್ಮಾ! ನಿನಗಂತಹ ಅನುಮಾನವೇನಾದರೂ ಇರುವುದಾದರೆ ಹೇಳಿ ಬಿಡು.

ಜೋದ—ಅನುಮಾನವಿಲ್ಲದೆ ನಾವು ಹೀಗೆ ಹೇಳುತ್ತೇವೇನು?

ಚಂಡ—ತಮ್ಮೆಲ್ಲರ ಅನುಮಾನ ಒತ್ತಟ್ಟಿಗಿರಲಿ!

ಹಂಸಿ—ಚಂಡಾ! ಹೇಗೂ ಇರಲಿ. ರಾಜ್ಯಸೂತ್ರಗಳನ್ನು ಕೆಲವು ಕಾಲ ಬೇರೆಯವರು ವಹಿಸಿದರಾಗದೆ?

ಚಂಡ—ಮಾತುಶ್ರೀ! ಇಂತಹ ಮಾತು ನಿನ್ನ ಬಾಯಿಂದ ಬರಬೇಕಾದರೆ—

ಜೋದ—ನಿನ್ನಲ್ಲಿ ತಪ್ಪು ಹಲವಿರಬೇಕು!

**ಚಂಡ**—ದೇಶೋನ್ನತಿಗೆ ವಿರುದ್ಧವಾದ ಆಚರಣೆ ನನ್ನದೇನಿರುವುದು?

**ರಣ**—ನೀನಿದು ತನಕ ದೇಶಕ್ಕೆ ಹಿತವನ್ನು ಬಯಸಿದುದೆ ಸಾಕು. ರಾಠೋರರೊಡನೆಯೂ ವಂಚನೆಯೆ?

**ಜೋದ**—ಹೆಸರಿಗೆ ತಕ್ಕ ಮುಕುಲನಿಗೆ ರಾಜ್ಯ!

**ಚಂಡ**—ಯುವರಾಜ! ಹಿಂದುಮುಂದು ಯೋಚನೆ ಮಾಡಿಯೆ ಮಾತನಾಡಬೇಕು!

**ಜೋದ**—ನಮಗೆ ಕೂಡ ನೀತಿಬೋಧನೆ ಮಾಡುತ್ತಿರುವೆಯಾ? ನೀನು ಮಾಡಿರುವುದು ಯಾವ ನೀತಿ? ನಿನ್ನ ಅಧಿಕಾರದೊಳಗಿನವರೆಲ್ಲರೂ ನಿನ್ನ ಪಕ್ಷಪಾತಿಗಳು! ನಿನ್ನ ಸಹೋದರ ರಘುದೇವನು ಮಹಾಪುರುಷನೆಂದುಕೊಂಡು ಆತನಿಗೆ ನ್ಯಾಯಾಧಿಕಾರವನ್ನು ಕೊಟ್ಟಿರುವೆ! ಆ ಕುತಂತ್ರಗಾರ ಚೇಲಾರಾಮನು ಸಕಲ ಸೇನೆಗೂ ಅಧಿಪತಿ! ಇನ್ನು ಹುಡುಗಾಟಿಕೆಯ ಎಳೆಯ ರಕ್ತದ ಯುವಕರು ನಿನ್ನ ಮಂತ್ರಿವರ್ಗವಂತೆ! ಈ ಕಪಟ ವರ್ತನೆಯನ್ನು ನಾವರಿಯೆವೆಂದು ಭಾವಿಸಿರುವೆಯಾ?

**ಯಾದವ**—ರಾಜ್ಞೀ! ಇವರು ನಿನ್ನ ಬಂಧುಗಳು. ನಿನ್ನ ಅನುಮತಿಯಿಂದಲೆ ಇಂತಹ ಮಾತುಗಳನ್ನು ಆಡುತ್ತಾರೆಂದು ನಾನು ಗ್ರಹಿಸಬೇಕಾಗುತ್ತಿದೆ.

**ರಣ**—ಯಾದವಸೇನ! ನಿಮ್ಮ ಒಳಸಂಚೆಲ್ಲವೂ ನಮಗೆ ತಿಳಿದಿರುವುದು, ಹೇಗೂ ಇರಲಿ. ಹಂಸೀ! ನಿನ್ನ ಕೂಸು ಇನ್ನೂ ಬದುಕಿಕೊಂಡಿರುವಾಗಲೆ ಇವರ ಹಂಚಿಕೆ ಹೊರಬಿದ್ದುದು ನಮ್ಮ ಭಾಗ್ಯವೆ ಸರಿ!

**ಯಾದವ**—ರಾಣಾಜಿ! ತಾವು ಮಾರ್ವಾಡದಂತಹ ರಾಷ್ಟ್ರಾಧಿಪತಿಗಳು ಈ ತೆರನಾದ ಹೊಂಚುಗಾರಿಕೆಯು ತಮಗೆ ಕೇವಲ ಅನುಚಿತ! ಮದ್ಯಸೇವನೆಯ ದುರಾಚಾರದ ಪ್ರಭಾವದಿಂದಲ್ಲದೆ ತಾವಿಂತಹ ಕಲ್ಪನೆಯನ್ನು ಮಾಡಿರಲಾರಿರಿ. ಸುಭಿಕ್ಷವು ನೆಲೆಗೊಂಡಿರುವ ನಮ್ಮ ಮೇವಾರಕ್ಕೆ ತಮ್ಮ ಆಗಮನವು ದುರ್ಭಿಕ್ಷದಂತಾಗುವುದು! ರಾಣಿ ಹಂಸಾಬಾಯಿಯಲ್ಲಿ ಇಲ್ಲದ ಕಲಹಾಂಕುರ

ವನ್ನು ಬಿತ್ತುವುದಕ್ಕೆ ಪ್ರಯತ್ನಮಾಡಿದಿರಿ. ಇದರ ಪರಿಣಾಮ ವನ್ನು ತಾವು ಯೋಚಿಸಿರುವಂತೆ ಕಾಣುವುದಿಲ್ಲ!

ರಣ—ಯಾದವಸೇನ! ಪರಿಣಾಮವು ಗೊತ್ತಾಗಿರುವುದರಿಂದಲ್ಲವೆ ನಾವಿಲ್ಲಿಗೆ ಬಂದಿರುವುದು?

ಹಂಪಿ—ಯಾದವಾ! ಏತಕ್ಕಾಗಿ ಸುಮ್ಮನೆ ಮನ ಬಂದಂತೆ ಮಾತ ನಾಡುತ್ತಿರುವೆ? ಅಪ್ಪಾಜಿಯವರನ್ನು ದೂರಿದೆಯೆಂದರೆ ನನ್ನನ್ನು ದೂರಿದಂತೆಯೆ ಸರಿ! ಅವರು ನಿನಗಿಂತಲೂ ಎಷ್ಟೋ ಹಿರಿಯರು; ಹೇಗೆ ತಾನೆ ತಪ್ಪಿ ಬಿದ್ದಾರು?

ಚಂಡ—ಮಾತುಶ್ರೀ! ಇವರು ನಿನಗೆ ಬಂಧುಗಳೆ ಸರಿ. ಆದರೂ— ನಿನಗೆ ಹಿತವಾಗಲಿ, ಆಗದಿರಲಿ—ನಾನೆರಡು ಮಾತು ಹೇಳ ಬೇಕಾಗಿದೆ. ನನ್ನ ಮೇಲೆ ನಿನಗೆ ಅಸೂಯೆ ಹುಟ್ಟುವಂತೆ ಇವರು ದುರ್ಬೋಧನೆ ಕೊಟ್ಟಿದ್ದಾರೆ. ಆದರೆ, ಮುಕುಲನ ವಿಷಯವಾಗಿ ನನ್ನ ಭಾವನೆ ಹೇಗಿದೆಯೆಂಬುದಕ್ಕೆ ಏಕ ಲಿಂಗೇಶ್ವರನೆ ಸಾಕ್ಷಿ!

ಹಂಪಿ—ಇದಕ್ಕೆಲ್ಲ ಏಕಲಿಂಗೇಶ್ವರನ ಸಾಕ್ಷಿಯೇತಕ್ಕೆ? ಹೇಗೂ ರಾಜ್ಯ ವನ್ನು ಮುಕುಲನಿಗೆಂದು ಬಿಟ್ಟಿರುವೆಯಷ್ಟೆ? ಮತ್ತೇತಕ್ಕೆ ನಿನಗೆ ಅಧಿಕಾರದಲ್ಲಿ ಅಪೇಕ್ಷೆ?

ಚಂಡ—ನಾನೇನಾದರೂ ನನಗೆ ಅಧಿಕಾರ ಬೇಕೆಂದು ಕೇಳಲಿಲ್ಲ. ನಿನ್ನ ಮಾತಿಗೆ ಕಟ್ಟುಬಿದ್ದು ನಾನೀ ಕಾರ್ಯವನ್ನು ವಹಿಸಿದೆನಲ್ಲದೆ ಮತ್ತೆ ಬೇರೆಯಲ್ಲ.

ಹಂಪಿ—ಹಾಗಾದರೆ ನನ್ನ ಮಾತನ್ನು ಈಗಲೂ ನಡಿಸಬಾರದೇಕೆ?

ಚಂಡ—ನಡಿಸದೆ ಉಂಟೆ? ಆದರೆ, ನೀನು ತುಂಬ ಸರಳ ಸ್ವಭಾವದವಳು; ವಂಚಕರ ಬಲೆಗೆ ಬಿದ್ದು ಮುಕುಲನಿಗೇನಾದರೂ ಅನಿಷ್ಟ ಸಂಭ ವಿಸೀತೊ ಎಂಬ ಅನುಮಾನವಿದೆ.

ಹಂಪಿ—ಅಂತಹ ಅನುಮಾನವನ್ನು ಬಿಟ್ಟುಬಿಡು. ಅಪ್ಪಾಜಿಯವರಿದ್ದಾರೆ; ನನಗೆ ಪ್ರಕೃತ ಅವರಿಗಿಂತಲೂ ಹೆಚ್ಚಿನವರು ಯಾರು?

**ರಣ**—ಸರಿ! ರಾಜಕಾರ್ಯ ನಮಗೊಂದು ಹೊಸ ವಿದ್ಯೆಯಲ್ಲ! ಹಂಸೀ! ಈಗಿರುವ ಅವ್ಯವಸ್ಥೆಯೆಲ್ಲವನ್ನೂ ತೆಗೆದು ಬಿಟ್ಟು, ಮೇವಾರವು ಉನ್ನತಿಗೆ ಬರುವಂತೆ ಮಾಡುವ ಭಾರ ನನ್ನದು! ಏನೂ ಯೋಚನೆ ಬೇಡ, ಕಂಡೆಯಾ?

**ಚಂಡ**—ರಾಜ್ಞೀ! ರಾಠೋರರಾಣರು ರಾಜಕಾರ್ಯ ಧುರಂಧರರೆ ಆಗಿರಬಹುದು. ಆದರೆ ತಂತಮ್ಮ ವಸ್ತುವಿನ ಮೇಲೆ ಅಭಿಮಾನ ವಿಶೇಷವಿರುವುದು ಮಾನವ ಪ್ರಕೃತಿ. ಆದುದರಿಂದ ಮೇವಾ ರಕ್ಕೆ ಇವರಿಂದ ಏಳಿಗೆಯುಂಟಾದೀತೆಂಬುದರಲ್ಲಿ ನನಗೇನೂ ವಿಶ್ವಾಸವಿಲ್ಲ.

**ಹಂಸಿ**—ಹೇಗೂ ಇರಲಿ.

**ಯಾದವ**—ಚಂಡಾಜಿ! ಸ್ತ್ರೀಯರಲ್ಲಿ ತರ್ಕಿಸಿ ಪ್ರಯೋಜನವಿರದು, ಅದರಲ್ಲಿಯೂ ಈಕೆಯು ಮಾತ್ಸರ್ಯಯುಕ್ತೆ, ಸಂಶಯಗ್ರಸ್ತೆ— ಎಷ್ಟು ಹೇಳಿದರೂ ಏನೂ ಸಾರ್ಥಕವಾಗದು! ರಾಜ್ಞಿ! ನಿನ್ನೀ ಪ್ರವರ್ತನೆಯಿಂದ ಮೇವಾರಕ್ಕೆ ಅನಿಷ್ಟನೆ ವಿನಾ ಮತ್ತೇನೂ ಇರದು.

**ಚಂಡ**—ಚಿಕ್ಕಮ್ಮಾ! ನೀನೀಗ ಇವರ ಬಲೆಯೊಳಗೆ ಬಿದ್ದಿರುವೆ. ಇದೊ, ನಾನು ಅಧಿಕಾರದ ಆಸೆಯಿಂದ ಆಡುವ ಮಾತೇನೂ ಅಲ್ಲ. ಮಾತೃಭೂಮಿಯು ಹಾಳಾಗ ಬಾರದೆಂಬುದೆ ನನ್ನ ಅಪೇಕ್ಷೆ. ಆದುದರಿಂದ ನಿನ್ನ ಸಂಶಯವೆಲ್ಲವನ್ನೂ ಆಚೆಗೆ ತಳ್ಳಿಬಿಡು!

**ಹಂಸಿ**—ಹೇಗೂ ಇರಲಿ. ಕೆಲವು ಕಾಲ ಅಪ್ಪಾಜಿಯವರು ನೋಡಿ ಕೊಂಡಿದ್ದರೇನು ದೋಷ?

**ಯಾದವ**—ಚಂಡಾಜಿ! ನೀನೇನು ಮಾಡಿದರೂ ಆಕೆಯ ಮನಸ್ಸನ್ನು ತಿರುಗಿಸಲಾರೆ. ನೀನಂತೂ ರಾಜ್ಯವನ್ನು ಮುಕುಲನಿಗೆಂದು ಬಿಟ್ಟಿರುತ್ತಿ. ಮತ್ತೇತಕ್ಕೆ ನಿನಗದರ ಗೊಡವೆ?

**ಚಂಡ**—ಆಗಲಿ. ಚಿಕ್ಕಮ್ಮಾ! ಇದೊ, ನಾನೀಗಲೆ ಹೊರಟೆ! ಅಧಿ ಕಾರದ ಆಶೆ ನನಗೆ ತಿಲಾಂಶವಾದರೂ ಇಲ್ಲ. ನಾನು ಬೇರೆ ಕಡೆಯಲ್ಲಿದ್ದುಕೊಂಡು, ಜನ್ಮಭೂಮಿಯಾದ ಮೇವಾರಕ್ಕೆ

ಹೆಚ್ಚಿನ ಪ್ರಯೋಜನವನ್ನು ಮಾಡಲಾರೆನಷ್ಟೆ-ಎಂಬುದೊಂದೆ ಚಿಂತೆಯಲ್ಲದೆ ಬೇರೇನೂ ಇಲ್ಲ. ಇದೊ, ಈ ಅಂಕಿತದ ಮುದ್ರೆ. (ಕೊಡುವನು.) ನನ್ನದೊಂದು ಕೊನೆಯ ಪ್ರಾರ್ಥನೆಯಿದೆ; ಎಲ್ಲ ಕೆಲಸಗಳನ್ನೂ ನೀನೆ ಸ್ವತಃ ನೋಡಿಕೊಂಡಿರು. ವಿಶ್ವಾಸಕ್ಕೆ ಪಾತ್ರರಲ್ಲದವರನ್ನು ಅಧಿಕಾರಕ್ಕೆ ಇರಿಸಬೇಡ. ಕೇವಲ ಬಂಧುಗಳಾದರೂ ಸ್ವಾರ್ಥವಿಲ್ಲದವರೆಂದು ಭಾವಿಸಲಾಗದು. ವಿವೇಚನೆಯಿಲ್ಲದೆ ಯಾವುದೊಂದು ಕೆಲಸವನ್ನೂ ಮಾಡಬಾರದು. ಶಾಸನಗಳನ್ನು ವಿಧಿಸುವುದರಲ್ಲಿ, ಧನಿಕ ನಿರ್ಧನ, ಕುಲೀನ ಕುಲಹೀನ, ಇವೇ ಮುಂತಾದ ತಾರತಮ್ಯಗಳಿಲ್ಲ.—

ಜೋದ—ಈ ರಾಜನೀತಿಗಳು ನಮಗೆ ತಿಳಿಯದೆ?

ಚಂಡ—ಅಂತಃಕಲಹಗಳಿಗೆ ಆಸ್ಪದ ಕೊಟ್ಟರೆ ಅನರ್ಥವಾಗುವುದು. ಪಕ್ಷಪಾತವು ಅಧಃಪತನಕ್ಕೆ ಮೂಲ. ರಾಷ್ಟ್ರ ಸಂಪತ್ತಿಯೆ ರಾಜಶಕ್ತಿ ಧರ್ಮವೆ ದೈವ. ಈ ವಿಷಯಗಳನ್ನು ಮಾತ್ರ ಸದಾಕಾಲವೂ ಜ್ಞಾಪಕದಲ್ಲಿಟ್ಟುಕೊಂಡರಾಯಿತು. ನಾನಿನ್ನು ಈ ಚಿತ್ತೂರಲ್ಲಿ ನಿಲ್ಲುವುದಿಲ್ಲ. ನನ್ನಿಂದ ನಿನ್ನ ಕೂಸಿಗೇನಾದರೂ ಕೆಡುಕು ಬಂದೀತೆಂದು ನೀನು ಕೊಂಚವೂ ಭಾವಿಸಬೇಡ. ನಾನು ಹೇಳಿದ ಮಾತುಗಳನ್ನು ಮಾತ್ರ ಮರೆಯಬೇಡ. ಇದೇ ನನ್ನ ಪ್ರಾರ್ಥನೆ. ಈಗ ನನಗನುಜ್ಞೆಯಾಗಲಿ.

(ನಮುಸ್ಕರಿಸುವನು.)

ಹಂಸಿ—ಹೂಂ! ಒಳ್ಳೆಯದು!

(ಚಂಡನೂ ಯಾದವನೂ ಹೋಗುವರು.)

ರಣ—ಸೊಗಸಾದ ಭಾಷಣವಲ್ಲವೆ?

ಜೋದ—ಎಷ್ಟೆಂದರೂ ಸಿಸೋದಿಯನಲ್ಲವೆ? ಶಿಶು ಉದಯವಾಗುತ್ತಿದೆಯಷ್ಟೆ! ಆದುದರಿಂದ ಬುದ್ಧಿ ಕೊಂಚ ಕಡಿಮೆ! ಅಲ್ಲದೆ ಹೋದರೆ ಇಂತಹ ಕುತಂತ್ರವನ್ನು ಹೂಡಿ ಸಿಕ್ಕಿಬೀಳುತಲಿದ್ದನೆ?

ಹಂಪಿ— ಅಪ್ಪಾಜೀ! ನಿಮ್ಮನ್ನು ಹೇಗೆ ವಂದಿಸಲಿ? ಕೈತಪ್ಪಿ ಹೋದ ಕೂಸು ಕೈಗೆ ಬಂತು! ನಿಮ್ಮ ಸಾಹಸವಲ್ಲದಿದ್ದರೆ ನನ್ನ ಬಾಳು ಗೋಳಾಗುತಿತ್ತು!

ರಣ—ನಿನಗೊಂದರ ಹಂಬಲೂ ಬೇಡ. ಎಲ್ಲ ನಾನು ಮಾಡುತ್ತೇನೆ'

(ಹೊರಡುವನು.)

ಹಂಪಿ—ಆದಲ್ಲ. ನನ್ನ ಕೂಸಿಗೆ ಎಂತಹ ಗಂಡಾಂತರ! ಸ್ಮರಿಸಿಕೊಂಡರೆ ಮೈಯಲ್ಲ ನಡುಗುತ್ತಿದೆ. ಭಗವಂತಾ! ವ್ಯಾಸ ಮಾತೆಯ ಅನುಗ್ರಹ ಇದು ತನಕ ಪರಿಪೂರ್ಣವಾಗಿದೆ. ಇನ್ನು ನಮ್ಮ ಮೋಕಿಗೆ ರಾಜ್ಯವನ್ನು ಕಾದು ಕೊಟ್ಟಿಯೆಂದರೆ! ಮಾತೆ!

|| ಮತ್ತಕೋಕಿಲ ||

ಸಾರ ಸಾರಸಮಾನ ಲೋಚನ ಕಾಂತ ಕಾಂತಿಯುತಾನನೇ |
ಭೂರಿ ಭೂರಿಪು ಸಂಘ ಸಂಹೃತಿಶಕ್ತಿ ಶಕ್ತಿಸಮನ್ವಿತೇ ||
ಮಾರ ಮಾರಣದಕ್ಷ ದಕ್ಷಮುದಾಪಹಾಂಕ ವಿರಾಜಿತೇ ||
ಧೀರಧೀ ರತಿಪಾಲ ಪಾಲನಶೀಲೆ ಪಾಲಿಪುದಂಬಿಕೇ ||

[ಷಡಕ್ಷರಿ]



## ೧೯. ಚಂಡನ ಚಿಂತೆ.

**ಚಂಡ**—ಆಹಾ! ಅಂಬಾ ಭವಾನೀ! ನಿನ್ನ ಚಿತ್ತವು ಹೀಗಿತ್ತೆ?—ಅಪವಾದದಷ್ಟು ಶೋಚನೀಯವಾದುದು ಯಾವುದೂ ಇಲ್ಲವೆಂದು ಹೇಳುತ್ತಾರೆ. ಆದರೂ ಅದರಿಂದ ನನಗೆ ವಿಶೇಷ ವ್ಯಥೆಯುಂಟಾಗುವುದಿಲ್ಲ. ಹುಟ್ಟಿ ಬೆಳೆದ ಊರನ್ನು ಬಿಟ್ಟು ಹೋಗುವುದೆಂದರೆ? ಶಿವ ಶಿವಾ! ಮಾನವರ ನಾಲಗೆಯಾದರೂ ಎಷ್ಟು ಕ್ರೂರ! ಖಡ್ಗಧಾರೆಗಿಂತಲೂ ತೀಕ್ಷ್ಣವೆ ಸರಿ!

**ಯಾದವ**—ಚಂಡಾಜಿ! ಏತಕ್ಕಾಗಿ ವ್ಯಥೆಪಡುವೆ? ಅಂಬಾ ಭವಾನಿಯ ಇಷ್ಟಕ್ಕೆ ವ್ಯತಿರಿಕ್ತವಾಗಿ ನಡೆಯಲು ಯಾರಿಂದಲೂ ಸಾಗದು.

**ಚೇಲಾ**—ದೇಶಹಿತವನ್ನು ಬಯಸುವವರು ಸ್ಥಾನಚ್ಯುತಿಯನ್ನು ಗಣಿಸಕೂಡದು.

**ಚಂಡ**—ಆ ಯೋಚನೆಯಲ್ಲ. ರಾಠೋರರು ಇಂತಹ ಕುತಂತ್ರವನ್ನು ಏತಕ್ಕಾಗಿ ಹೂಡಿದರೊ?

**ಯಾದವ**—ಮೇವಾರವನ್ನು ತಮ್ಮ ವಶಪಡಿಸಿಕೊಳ್ಳಬೇಕೆಂದಲ್ಲದೆ ಮತ್ತೆ ಬೇರೆಯಿಲ್ಲ.

**ಚಂಡ**—ನನಗೆ ಕೂಡ ಹಾಗೆಯೆ ಕಾಣುತ್ತಿದೆ. ಆದುದರಿಂದ–ಯಾದವಾ! ಸಿಸೋದಿಯರ ಹೆಸರು ಅಳಿದು ಹೋಗದಂತೆ ಮಾಡುವುದು ನಿಮ್ಮ ಕೈಯಲ್ಲಿದೆ.

**ಯಾದವ**—ನಾನೇನೆಂದು ಹೇಳಲಿ? ರಾಠೋರರಿಗೂ ನಮಗೂ ಎಂದೂ ಸರಿಬೀಳದು!

**ಚೇಲಾ**—ನಮ್ಮೆಲ್ಲರನ್ನೂ ಅಧಿಕಾರದಿಂದ ಕೀಳದೆ ಎಷ್ಟು ಮಾತ್ರಕ್ಕೂ ಬಿಡರು.

**ಚಂಡ**—ಹೇಗಾದರೂ ಮಾಡಿ ನಿಮ್ಮಲ್ಲೊಬ್ಬನಾದರೂ ಸ್ಥಾನವನ್ನಿಟ್ಟುಕೊಳ್ಳುವಂತೆ ಯತ್ನಿಸಬೇಕು.

**ಚೇಲಾ**—ಪ್ರಯತ್ನ ಮಾಡಿ ನೋಡಬಹುದು; ವಂಚಕರೊಡನೆ ವಂಚನೆಯೆ ನಡೆಯಬೇಕು.

**ಚಂಡ**— ಆಗಲಿ. ದೈವತಂತ್ರ! ಚಿಂತಿಲ್ಲ. ಸಾಧ್ಯವಾದಷ್ಟು ದಿನ ನಿಮ್ಮ ನಿಮ್ಮ ಕರ್ತವ್ಯ ಮಾಡುತ್ತಿರಿ. ಆ ಮೇಲೆ ಅಂಬಾ ಭವಾನಿಯ ಚಿತ್ತ. ಏನಾದರೂ ವಿಶೇಷ ವಿದ್ಯಮಾನಗಳು ನಡೆದವೆಂದರೆ ಕೂಡಲೆ ನನಗೆ ತಿಳಿಸಿರಿ. ಹಾರಾವತಿಗೆ ಹೋಗುವ ಮಾರ್ಗದಲ್ಲಿ ಪಾರ್ವತೀ ನದಿಯ ಬಳಿಯ ವನದಲ್ಲಿ ಇರ ಬೇಕೆಂದು ನನ್ನ ಸಂಕಲ್ಪ. ಯಾದವಾ! ನನ್ನ ಕಾಯ ಮಾತ್ರ ಇಲ್ಲಿಂದ ಹೋದೀತಲ್ಲದೆ ಜೀವವು ಸದಾ ಇಲ್ಲೆ ನೆಲಸಿರುವುದು! ನನ್ನ ಮಾತೃ ಭೂಮಿಯ ಸಲುವಾಗಿ, ಅವಶ್ಯಬಿದ್ದಾಗ ರಕ್ತವನ್ನು ಸುರಿಸಲು ಸದಾಕಾಲವೂ ಸಿದ್ಧನಾಗಿಯೆ ಇದ್ದೇನೆ! ಇದಕ್ಕೂ ಹೆಚ್ಚಿನದು ಏನು ಹೇಳಲಿ?

[ಎಲ್ಲರೂ ಕಣ್ಣೀರಿಡುವರು.]

# ೧೦. ವಿಚಿತ್ರ ಶಾಸನ.

[ಚಂಡನಿಂದ ಪ್ರೇರಿತನಾದ ಯಾದವಸೇನನು ವೃದ್ಧವೇಷಧಾರಿಯಾಗಿ ರಣಮಲ್ಲನ ಶಾಸನಗಳನ್ನು ಕಣ್ಣಾರೆ ಕಾಣುವ ಸಲುವಾಗಿ ಸಭಾಮಂಟಪವನ್ನು ಪ್ರವೇಶಿಸುವನು.]

ಯಾದವ—ರಾಮ್ ರಾಮಾ ರಾಮಾ ರಾಮಾ! ಏನಪ್ಪಾ? ರಾಣಾ ಜ್ಯೋರು ದರ್ಬಾರಕ್ಕೆ ಬಂದ್ದಾರೇನು? ನಮ್ಮೊಡೆಯಾ! ಅಡ್ಡ ಬಿದ್ದೆ ಬುದ್ಧಿ! (ಚುನಿಲಾಲನಿಗೆ)

ಚುನಿಲಾಲ—ಛಿ ಛಿ! ಮುದಿಭ್ರಾಂತು! ನಡಿಯೊ ಆಚೆ! ನಿನ್ನ ಇಲ್ಲಿ ಬರೋಕೆ ಹೇಳಿದವ್ರಾರು?

ಯಾದವ—ನಮ್ಮಪ್ಪಾ! ರೇಗಿಕೊ ಬೇಡಣ್ಣಾ! ನನ್ಗುರ್ತು ನಿಂಗಿಲ್ವೇನು? ಮೂರು ವರ್ಸದಾ ಮುಂಚೆ ನೀನೆಯಲ್ವೆ ನನ್ನಾ ಇಲ್ಲಿ ಕರ್ಕೊಂಡು ಬಂದಪ್ನ? ನಮ್ಮಪ್ಪಾ! ಬಲು ದೊಡ್ಡ ಉಪ್ಕಾರ ಮಾಡಿದೆ ಕಾಣಯ್ಯಾ!

ಚುನಿ—ಏನಪ್ಪಾ? ಇಂಗೆಲ್ಲ ಒದ್ರುತ್ತೀ? ನಿನ್ನಾ ಆರು ಕಂಡವ್ರೆ?

ಹೀರಾಲಾಲ—ಮೂರು ವರ್ಸದಾ ಮುಂಚಿನ್ಮಾತು; ಅದು ಹೋಗ್ಲಪ್ಪಾ! ಇನ್ನು ಮೂರು ವರ್ಸದ್ಮೇಗೆ ನೀ ಈಗಿರುವಾಂಗೆ ಇದ್ದೀಯೇನಣ್ಣಾ?

ಯಾದವ—ದ್ಯಾವ್ರು ಬದ್ಕಿಸಿದ್ರೆ ಇದ್ದೇನಪ್ಪಾ!

ಚುನಿ—ಮುದ್ಕಯ್ಯಾ, ನೀ ಬಂದ ಹಾದಿ ಹಿಡ್ಕೊಂಡು ನಡೀತಿರು. ನಿನ್ನ ನಾವಲ್ಲ ಕಂಡವ್ರು. ಈಗಿನ್ರಾಣಾಜ್ಯೋರು ಬ್ಯಾರೆ ಎಂಬುದು ನಿಂಗೆ ತಿಳೀದೇನು?

ಯಾದವ—ಏನಪ್ಪಾ ಬ್ಯಾರೆ ಗೀರೆ? ಚಂಡ್ಸಿಂಗ್ರಲ್ಲೇನು?

ಹೀರಾ—ಸರ್ಸರಿ. ನೀ ದೋಪ್ರಾಯುಂಗ್ದೋವ್ನ. ನಿನ್ಚಂಡ್ಗಿಂಡ ಇಲ್ಲಿಲ್ಲ ಕಂಡೆಯಾ? ನೀ ಹೊಂಟು ಹೋಗು!

ಚುನಿ—ನಡೆ. ರಾಣಾಜ್ಯೋರು ಬರೋ ಹೊತ್ತಾತು.

ಯಾದವ—ಬರ್ಲಪ್ಪಾ ಬರ್ಲಿ. ನಾನೂ ಅದ್ಕೇ ಬಂದವ್ನೆ. ರಾಣಾ ಜ್ಯೋರ್ನ ಕಂಡ್ಕೊಂಡು ಹೋಗೋಕ್ ಬಂದವ್ನೆ.

ಚುನಿ — ಅಷ್ಟೆ ವಿನಾ ಎಂಗಪ್ಪಾ ಒಳಗ್ ಬಂದೆ?

ಹೀರಾ—ಚುನ್ಯಾ! ಸೀ ಇಂಗೆ ಚರ್ಚೆ ಮಾಡ್ಕೊಂಡು ಕುಂತ್ರೆ ನಮ್ಕೆಲ್ಲಾ ಹೋದಾತು ಕಂಡ್ಯಾ? ಆ ಮುದ್ಕನಾ ದೊಬ್ಬಾಚೆ! (ದೊಬ್ಬ ಹೋಗುವನು.)

ಯಾದವ– ದಮ್ಮಯ್ಯಣ್ಣಾ! ನಾ ತುಂಬ ಕಟ್ಟದೋಳಗಾ ಬಿದ್ದವ್ನೆ. ದ್ಯಾವ್ರನ್ ಕಂಡ್ಕೊಂಡ್ ನನ್ಕಟ್ಟಾ ಹೇಳ್ಕೊಂಬೋಕ್ ಬಂದವ್ನೆ!

ಚುನಿ—ನಮ್ತಾವಾ ಇಂಗೇಳಿದ್ರೆ ನಡ್ಯೋಕಿಲ್ಲ. ನಿನ್ಗಡ್ಡಾ ಹಿಡ್ದ್ ಎಳದಾ ಬಿಡ್ತೀನ್ ನೋಡು!

ಯಾದವ—ನನ್ಗಡ್ಡದಷ್ಟು ನಿಂಗ್ನೂಕ್ದು ಕೂಡ ಇಲ್ಲಾಕಣಯ್ಯಾ? ನಾ ನಿನ್ಕೊನ್ನೆಯೋನಲ್ಲಾಕಣಪ್ಪಾ! ನಂಗೀಗ ತೊಂಬತ್ತಯ್ದು ಕಾಲ ನಡೀತ್ಯೆತೆ ಕಂಡ್ಯಾ? ಅಯ್ದು ಮಂದಿ ರಾಣಾಜ್ಯೋರು ನನ್ಕಣ್ಣೆ ದಿರಾಗೆ ಆಗ್ಯೋದ್ರು!

ಚುನಿ— ಇದೊ, ನಿಂಗೇನೂ ಬೇಕಾಗಿದೆ! ಈಗಿನ್ ರಾಣಾಜ್ಯೋರು ಮುಂಚಿನವ್ರಾಗೆ ಅಲ್ಲಕಣಪ್ಪಾ! ಅಷ್ಟೆ ವಿನಾ ಒಳಗ್ಬರೋಕೂಡ್ದು! ನಿನ್ನಂತ ಮುದಿ ಹಪ್ಪಾ ಕಂಡ್ರೆ ಗಲ್ಲಿಗೆ ಹಾಕ್ಸುತ್ತಾರೆ ನೋಡು! ಅವರ ಕಣ್ಣಿಗೆ ಬೀಳ್ಬೇಡ, ನಡೆ! (ಹೊರತಳ್ಳುವರು.)

ಯಾದವ—ಅಯ್ಯಯ್ಯೋ, ಮುದುಕನಾ ಕೊಲ್ತಾರಪ್ಪಾ, ಕೊಲ್ತಾರೆ! ಜಯಾಜಿ! ನನ್ಕಾಣಿರಾ? ನೀವಾದ್ರೂ ಹೇಳ್ಬಾರ್ದೇ?

ಜಯ—ಮುದುಕಯ್ಯಾ! ನಿನಗೆ ನನ್ನ ಹೆಸರು ಹೇಗೆ ಗೊತ್ತು?

ಯಾದವ—ಅಪ್ಪಾ! ಜಯಮಲ್ಲರೆಂದ್ರೆ ನಂಗೊತ್ತಿಲ್ವೇನು?

ಜಯ — ನಿನ್ನನ್ನು ಹಿಂದೆ ಎಲ್ಲಿಯೊ ನೋಡಿದ ಜ್ಞಾಪಕವಾಗುತ್ತಿದೆ.— ನಿನಗೆ ರಾಣಾಜಿಯವರಲ್ಲಿ ಏನು ಹೇಳಿಕೊಳ್ಳುವುದಕ್ಕಿದೆ?

ಯಾದವ—ಅವರ್ ಬರ್ಲಿ, ಪುತ್ತೆ ಹೇಳ್ತೀನಿ! ಅಪ್ಪಾ! ಈ ಪರಿ ಅಡ್ಡಿ ಮಾಡೋದಾದ್ರೆ ಬಡಜನ್ರು ತಮ್ಸಂಕ್ಟ ಎಂಗೆ ಹೇಳ್ಕೊಂಡಾರು! ಇದೇನ್ ಹೊಸ್ಪದ್ತಿ?

ಜಯು— ಅದು ಹಾಗೆಯೆ! ಚುನ್ನ್ಯಾ! ಆತನನ್ನು ನಿರ್ಬಂಧ ಪಡಿಸಬೇಡ.

ಯಾದವ—ಆಗ್ಲಪ್ಪಾ! ನಿಂಗೆ ದ್ಯಾವ್ರು ಒಳ್ಳೇದ್ ಮಾಡ್ಲಿ! ಜಯಾಜೀ! ಹೊತ್ತೇರ್ಕೊಂಡ್ಬಂತಲ್ಲಾ? ರಾಣಾಜ್ಯೋರು ಇನ್ನೂ ಬರ್ಲಿಲ್ಲ. ಯಾದವಜೀ, ಚೇಲಾಜೀ, ರೂಪ್ಜೀ, ಯಾರೂ ಕಾಣೆ! ನೀವೊಬ್ರೆ ಬಂದ್ದೀರಿ! ಏನಪ್ಪ ಇದೂ? ಮುಂಚಿನಾಗೆ ಯಾರಾದ್ರೂ ರಾಣಸಭೆಗೆ ಬಂದ್ಕೊಂಡ್ ತಂತಮ್ಗೋಳು ಅರಿಕೆ ಮಾಡಿಕೊ ಕೂಡ್ದಂತೆ! ಇದೆಲ್ಲ ಸಂಗೇನೊ ತೀರ ಹೊಸ್ತು ಕಾಣುತ್ತೆ!

ಜಯು—ಅಪ್ಪಾ! ಸುಮ್ಮಸುಮ್ಮನೆ ಏನಾದರೂ ಹರಟಿಕೊಂಡಿರ ಬೇಡ. ಎಲ್ಲರೂ ಬರುವ ಹೊತ್ತಾಯಿತು. ಅದೊ, ಬಂದೆ ಬಂದರು!

(ಜೋದ, ಬೋಳಾನಾಥ, ಮೋತೀಲಾಲ— ಇವರ ಪ್ರವೇಶ.)

ಜೋದ—ಜಯಾಜಿ! ತಾವು ಯಾವಾಗಲೂ ಎಲ್ಲರಿಗಿಂತಲೂ ಮುಂದಾಗಿ ಬರುತ್ತೀರಿ. ಅದೇನು ಹಾಗೆ? ರಾತ್ರೆ ಚೆನ್ನಾಗಿ ನಿದ್ದೆ ಕೂಡ ಹತ್ತುತ್ತಿದೆಯೊ ಇಲ್ಲವೊ ತಮಗೆ?

ಬೋಳಾ—ನನಗದೇ ಆಶ್ಚರ್ಯ! ನಮಗೆಂದರೆ ಏಳುವಾಗಲೆ ಹೊತ್ತು ಅಷ್ಟಕ್ಕೆ ಬರುತ್ತಿದೆ! (ತೋರಿಸುವನು)

ಮೋತಿ—ನನಗ ಬೇಕಾದರೆ ಎಷ್ಟು ಹೊತ್ತಿಗೆ ಎದ್ದರೂ, ಅತ್ತಿತ್ತ ಅಲೆ ದಾಡಿಕೊಂಡು ಬರುವಾಗಲೆ ಹೊತ್ತಾಗಿ ಹೋಗುತ್ತಿದೆ. ಆಸ್ಥಾನದ ಕಾಲ ಕೊಂಚ ಮುಂದಕ್ಕಿರಿಸಿದರಾಗದೆ?

ಬೋಳಾ—ಅಹುದಹುದು. ಪ್ರಾತಃಕಾಲ ಅದಕ್ಕೆ ಹೇಳಿಸಿದುದೆ ಅಲ್ಲ. ಸಾಧಾರಣ ಹದಿನೆರಡು ಗಳಿಗೆ ಹೊತ್ತಿಗಾದರೆ —— ——

ಮೋತಿ—ಏಕೆ ಏಕೆ? ಉಂಬುವ ಹೊತ್ತಿಗೆ? ಹಾಗಾಗದು. ಬೆಳ ಗಾಗುತ್ತಲೆ ಏನು ಕೆಲಸ? ಮಧ್ಯಾಹ್ನದ ಮೇಲಾದರೆ ಸಾಲದೆ?

ಬೋಳಾ—ಮಧ್ಯಾಹ್ನ ಕೊಂಚ ಕಣ್ಣಾಲಸ್ಯವಾಗುವುದಿಲ್ಲವೇ? ತುಸು ಹೊತ್ತು ಒರಗಿಕೊಳ್ಳೋಣವೆಂದು ಕಾಣುತ್ತಿದೆ!

ಜೋದ—ಅಂತೂ ಇಂತೂ ರಾಜಕಾರ್ಯಗಳಿಗೆ ಸರಿಯಾದ ಸಮಯವೆ ಸಿಗುವಂತಿಲ್ಲ. ಹಾಗಲ್ಲವೆ ಬೋಳಾಜಿ?

ಬೋಳಾ — ಏಕಪ್ಪ ಹಾಗೆ? ಸಾಯಂಕಾಲವಿದೆಯಷ್ಟೆ?

ಮೋತಿ—ಸರಿ ಸರಿ. ಒಳ್ಳೆಯ ಯೋಚನೆ! ಹಗಲೆಲ್ಲವೂ ನಾವೀ ರಾಜಕಾರ್ಯಗಳಲ್ಲಿ ಹೆಣಗಾಡುತಿದ್ದು, ಸಾಯಂಕಾಲದ ವೇಳೆ ಕೊಂಚ ಗಾಳಿಗೆ ಮೈಯೊಡ್ಡದಿದ್ದರೆ ಸರಿ ಬೀಳುವುದೇನು?

ಬೋಳಾ—ಮೋತಿಲಾಲಜಿ! ನಾನು ಹೇಳುತ್ತೇನೆ! ಇದಕ್ಕೆಲ್ಲ ರಾತ್ರಿಯ ವೇಳೆಯೆ ಬಲು ಚೆನ್ನಾಗುವುದು! ಹಾಗಲ್ಲವೆ ಯುವರಾಜರೆ?

ಜೋದ—ಆದರೆ ಒಂದಿದೆ! ಆ ಕಾಲಕ್ಕೆ ನಮ್ಮ ಅಪ್ಪಾಜಿಯವರು ಕೊಂಚ ಆಕಾಶಕ್ಕೆ ಏರಿರುತ್ತಾರಷ್ಟೆ?

ಬೋಳಾ—ಅದರಿಂದೇನು? ನಾವೇನಾದರೂ ಕೆಳಗಿರುವಂತಹರೆ? ಹಾಗೆ ಕೊಂಚ ಮದಿರಾದೇವಿಯ ಉಪಾಸನೆ ಮಾಡಿದೆವೆಂದರೆ ನಾಲಗೆ ಬಲು ಚುರುಕಾಗುವುದು! ಬುದ್ಧಿ ತೀಕ್ಷ್ಣವಾಗುವುದು! ತಮಗದರ ಅನುಭವವಿಲ್ಲ. ಕೊಂಚ ಆ ದೇವಿಯ ಆಶ್ರಯ ಮಾಡಿಕೊಳ್ಳಿರಿ. ನೋಡಿ ಮತ್ತೆ! ವೀರಶ್ರೀಯು ನಿಮ್ಮನ್ನು ಕ್ಷಣಕಾಲವೂ ಅಗಲಿರಲೊಲ್ಲಳು!

ಮೋತಿ—ಬೋಳಾಜಿ! ನೀವಂತಹ ವಿಚಕ್ಷಣರಾಗಿರುತ್ತ, ಒಂದು ಮಾತ್ರ ಯೋಚಿಸದೆ ಹೋದಿರಷ್ಟೆ?

ಬೋಳಾ—ನನ್ನ ಬುದ್ಧಿಗೆ ಕೂಡ ಗೋಚರವಾಗದಿರುವುದು? ಏನಪ್ಪ ಅದು?

ಮೋತಿ—ಮತ್ತೇನು? ರಾತ್ರಿಯ ವೇಳೆ ರಾಜಕಾರ್ಯಕ್ಕೆ ಸರಿಬಿದ್ದೀತೆಂದಿರಷ್ಟೆ? ಇಲ್ಲಿ ನೋಡಿರಿ: ನಾವು ದಿಗ್ದೇಶದಿಂದ ಕರೆಸಿರುವ ನಾಯಕಸಾನಿಯರಿರುವರಷ್ಟೆ? ಅವರ ಸಂಗೀತವೂ ಗಿಂಗೀತವೂ, ಇದಕ್ಕೆಲ್ಲ ನಮಗೆ ಅವಕಾಶ ಯಾವಾಗ? ರಾಣಾಜಿಯವರಿಗಂತೂ ಕೊಂಚವೂ ಅನುಕೂಲವಾಗದು!

ಬೋಳಾ—ಅದೀಗ ನಿಜ! ನನಗಾ ಯೋಚನೆಯೆ ಬಂದಿರಲಿಲ್ಲ. ಹಾಗಾದರೆ ಒಂದು ಮಾಡಬೇಕು — ಈ ರಾಜಕಾರ್ಯಗಳಿಗೆಲ್ಲ ನಿಯಮಿತ ಕಾಲವಿರಕೂಡದು! ಯಾವಾಗ ಅವಕಾಶವೊ ಆಗಲೆ ಮಾಡಬೇಕು!

**ಮೋತಿ**—ಅದೀಗ ಸರಿ!

**ಜಯ**— ಯುವರಾಜ! ರಾಣಾಜಿಯವರು ಇನ್ನೂ ಬರಲಿಲ್ಲ.

**ಜೋದ**— ನಾನು ನೋಡಿಕೊಂಡು ಬರುತ್ತೇನೆ. (ಹೋಗುವನು.)

(ಬೋಳನೂ ಮೋತಿಯೂ ನಾಟ್ಯಕ್ಕೆಂದು ಬಂದು ಕಾದಿರುವ ನರ್ತಕಿಯರೊಡನೆ ಪಿಸುಗುಟ್ಟಿಕೊಳೆಗ—)

**ಮೋತಿ**—ಇದೊ! ಜಾಗ್ರತೆ! ನಾನು ಹೇಳಿದಂತೆಯೆ ಮಾಡು.

**ಬೋಳಾ**—ರಾಣಾಜಿಯವರೊಡನೆ ಹೇಳಿ ನಿನಗೆ ಸರಿಯಾದ ಉಡುಗೊರೆ ಕೊಡಿಸುವ ಭಾರ ನನ್ನ ಮೇಲಿರಲಿ! ಜಯಾಜಿ! ನಾವೀಗಲೆ ಬರುತ್ತೇವೆ ಬಲ್ಲಿರಾ? (ಹೋಗುವರು.)

ಜಯ— (ತನ್ನಲ್ಲಿಯೆ) ಆಹಾ! ಅವಸ್ಥೆಯೆ! ಸಿಸೋದಿಯಾ ರಾಣರ ವೈಭವವೆಲ್ಲವೂ ಈ ಮದ್ಯಪಾಯಿಗಳ ಪಾಲಾಗಿ ಹೋಯಿತು!

ಯಾದವ—ಆಹಾ! ಸುಪ್ರಸಿದ್ಧ ಬಾಪ್ಪಾರಾವಳ, ಹಮೀರ ಮುಂತಾದ ವೀರರೆ ತುಂಬ ಸಾಹಸಪಟ್ಟು ಸ್ಥಾಪಿಸಿರುವ ಈ ಚಿತ್ತೂರು ಸಂಸ್ಥಾನವು ಇಷ್ಟರ ಮಟ್ಟಿನ ಅವನತಿಗೆ ಬಂದು ಹೋಯಿತೆ! ಜಯಾಜೀ! ಸಿಸೋದಿಯಾ ರಾಣರ ಆಸ್ಥಾನದೊಳಗೆ ಮದ್ಯಪಾಯಿಗಳು ಕೂಡ ಇದ್ದಾರೆಯೇನು? ವಿನೋದಪ್ರಿಯರು ರಾಜಕಾರ್ಯಭಾರಿಗಳೇನು?

ಜಯ—(ಮಾತಿನ ಮಟ್ಟನ್ನು ಕಂಡು ಬೆರಗಾಗಿ)—ಮುದುಕಯ್ಯಾ! ಅದನ್ನು ಏನೆಂದು ಹೇಳಲಿ? ನಾಯಿ ಮುಟ್ಟಿದ ಗಡಿಗೆ! ಉಡು ಹೊಕ್ಕ ಮನೆ! ಇವುಗಳಂತೆ ಈ ಆಸ್ಥಾನವು ಮಾನ್ಯರಿಗೆ ತ್ಯಾಜ್ಯ! ಆದರೂ ಒಕ್ಕಣ್ಣರ ರಾಜ್ಯದಲ್ಲಿ ಒಕ್ಕಣ್ಣನಾಗಿಯೆ ಇರಬೇಕಲ್ಲವೆ?

ಯಾದವ— ಏನಪ್ಪ! ನನಗಂತೂ ಈಗಿರುವ ಇಕ್ಕಣ್ಣು ಹೋಗಿ ಮುಕ್ಕಣ್ಣಾಗಿದ್ದರೆ ಚೆನ್ನಾಗುತಿತ್ತು!

ಜಯ—ಹಾಗೆಂದರೆ?

ಯಾದವ—ಇದೊ ನನ್ನ ಕಡೆಗೊಂದು ಸಲ ಚೆನ್ನಾಗಿ ನೋಡಬಾರದೆ?

ಜಯ — (ಯಾದವನೇನನೆಂದು ಗುರುತು ಹಿಡಿದು) — ಹಾ! (ಮುಂದೆ ಮಾತನಾಡದಂತೆ ಯಾದವನು ಸನ್ನೆ ಮಾಡುವನು)

ಯಾದವ—ಅದೊ! ಮಾತನಾಡಬೇಡಿರಿ. ರಾಣಾಜಿಯುವರು ಬರುವ ಹಾಗೆ ಕಾಣುತ್ತಿದೆ!

(ನರ್ತನವಾಗುವುದು. ರಣಮಲ್ಲ, ಮುಕುಲ, ಜೋದ, ರಾಜಮಾನ, ರಾಮ ಸಿಂಗ, ವಿನಯಸೇನ, — ಇವರು ಪ್ರವೇಶಿಸುವರು. ರಾಣನು ಮುಕುಲನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಿಂಹಾಸನದಲ್ಲಿ ಕುಳಿತುಕೊಳ್ಳುವನು. ಜಯಮಲ್ಲನು ನಿಂತಿರುವನು.)

ರಣ—ಏನದು?

ಜಯ—(ಯಾದವನ ಮರ್ಮವನ್ನು ಸ್ಮರಿಸಿಕೊಂಡು)—ರಾಣಾಜಿ! ಹಾರಾವತಿಯವರು ಏನೊ ಕೊಂಚ ಸಂಕಷ್ಟದಲ್ಲಿದ್ದಾರಂತೆ.

ರಣ— ಇರಲಿ ಇರಲಿ! ಒಳ್ಳೆಯದಾಯಿತು! ಯಾವಾಗ ನೋಡಿದರೂ ಈ ಕಾಟ ತಪ್ಪುವುದಕ್ಕಿಲ್ಲ. ಒಬ್ಬನಲ್ಲದಿದ್ದರೆ ಇನ್ನೊಬ್ಬನು! ಸಂಕಟವಂತೆ! ನಮ್ಮ ಸಂಕಟ ನಮಗಿಲ್ಲವೇನು?

ಜಯ—ಹಾಗಲ್ಲ—

ರಣ— ಜಯಮಲ್! ಸಾಕು ಮಾಡು! ಬೋಳಾನಾಥ ಬರಲಿಲ್ಲವೇನು?

ಯಾದವ—ರಾಣಾಜೀ! ನನ್ನ ಅರಿಕೆ ಒಂದೀಟು ಕೇಳ್ಬೇಕು ಬುದ್ಧೀ!

ರಣ— ಎಲಾ! ಈ ಮುದುಕನನ್ನು ಒಳಗೆ ಬಿಟ್ಟವರಾರೊ?

ಜಯ—ರಾಣಾಜಿ! ಈ ವೃದ್ಧರು ತುಂಬ ಪೀರಪುರುಷರು.

ರಾಮ—ರಾಣಾಜಿ! ತಾವು ಪ್ರತಿಯೊಂದಕ್ಕೂ ಹೀಗೆ ಆಗ್ರಹಗೊಂಡರೆ ಪ್ರಜಾಪಾಲನೆ ಹೇಗಾಗಬೇಕು?

ರಣ—ಆಗಲಿ! ಇದೊಂದು ಕರಕರೆ! ಆತನಿಗೇನು ಬೇಕಂತೆ?

ಯಾದವ—ಬುದ್ಧೀ! ನಮ್ಮೂರೇ? ನಮ್ಮೂರು ವೇತ್ರವತೀ ನದೀ ಬಳಿ!

ರಣ—ಎಲಾ ಮೂರ್ಖ! ನಿಮ್ಮೂರು ಯಾರಿಗೆ ಬೇಕಾಗಿದೆಯೊ? ನೀನೇತಕ್ಕಾಗಿ ಬಂದೆ ಹೇಳು! ಇಲ್ಲವಾದರೆ ವೇತ್ರದ ಸವಿಯನ್ನು ನೋಡುವೆಯಂತೆ!

ಯಾದವ—ತಾವು ದ್ಯಾವ್ರು ಬುದ್ಧಿ! ನಾ ಹೇಳ್ತೀನಿ- ನಮ್ಮನಿಯಾಗೆ ಮುಸಲ್ಮಾನ್ರು ಬಂದು ಕೊಂಡಿದ್ದಾರೆ! ಮುಸಲ್ರು!

ವಿನಯ—ಹಾಗಾದರೆ ಅದಕ್ಕೊಂದು ಮಾಡು; ನೀನು ಮೆತ್ತಗೆ ಅವರ ಮನೆಯೊಳಗೆ ಹೊಕ್ಕು ಬಿಡು! ಸುಮ್ಮನೆ ನಮ್ಮ ರಾಣಾಜಿ ಯವರಿಗೆ ಉಪದ್ರವ ಮಾಡಬೇಡ ಕಂಡೆಯಾ? ನಡಿಯುತ್ತಿರು!

(ಬೋಳನೂ ಮೋತಿಯೂ ಪ್ರವೇಶಿಸುವರು.)

ರಣ—ಏನು ಬೋಳಾಜಿ! ಏನಾದರೂ ವಿಶೇಷವಿದೆಯೆ?

ಬೋಳಾ—ರಾಣಾಜಿ! ತಮ್ಮಂತಹ ವೀರಪುರುಷರ ಸೇವೆಯನ್ನು ಬಯಸಿ ಕೊಂಡು ಬಂದಿರುವರು ಹಲವರಿರುವರು. ಅಂತಹರಿಗೆ ಸರಿಯಾದ ಬಹುಮಾನವು ಭಂಡಾರದಿಂದ ಸಲ್ಲುವುದು ಉಚಿತವೆ ಸರಿ.

ರಾಮ—ಆದರೆ, ಅನಾವಶ್ಯಕರಾದವರಿಗಾಗಿ ಹಣವನ್ನು ವೆಚ್ಚಮಾಡು ತಿದ್ದರೆ ಅಲ್ಪಕಾಲದಲ್ಲಿಯೆ ಭಂಡಾರ ತೀರ ಬರಿದಾಗಬಹುದು.

ರಣ—ರಾಮಾಜಿ! ಹಾಗೊಂದೂ ಯೋಚಿಸಬೇಡಿರಿ. ಮೇವಾರವು ಬಹು ಫಲವತ್ತಾದ ರಾಜ್ಯ. ರಜತನಿಧಿ ಬೇರೆ ಇರುವುದು. ಬೆಳ್ಳಿ ಸಮೃದ್ಧಿಯಾಗಿ ಸಿಕ್ಕುತ್ತಿದೆ.

ರಾಮ—ಆ ದ್ರವ್ಯವನ್ನು ದೇಶಹಿತಕ್ಕಾಗಿ ವೆಚ್ಚಮಾಡಬೇಕಲ್ಲವೆ?

ಮೋತಿ—ನಾವೆಲ್ಲರೂ ದೇಶದವರಲ್ಲದೆ ಕಾಡಿನವರಲ್ಲವಷ್ಟೆ? ನಮ್ಮ ಹಿತ ಕ್ಕಾಗಿ ವಿನಿಯೋಗಿಸಿದರೇನು ದೋಷ?

ಜಯ—ರಾಣಾಜಿ! ರಜತನ ನಿಧಿಯಿಂದ ಈಗ ನಮಗೇನೂ ಉತ್ಪತ್ತಿ ದೊರೆಯುವುದಿಲ್ಲವೆಂಬುದನ್ನು ಮರೆತಿರೆಂದು ಕಾಣುತ್ತಿದೆ.

ರಣ—ಅದೇನೊ, ಸಮುದ್ರತೀರದೊಳಗೆ ತಾಮ್ರಮುಖಿಗಳು ಇರುವ ರಂತೆಯಲ್ಲವೆ? ಅವರನ್ನು ಕರೆಸಿ ಕೆಲಸ ಮಾಡಿಸಿದರಾಯಿತು.

ಜಯ—ಚಿತ್ತ!

ವಿನಯ—ಈಗ ಈ ಮುದುಕನ ವ್ಯವಸ್ಥೆ ಮಾಡೋಣ. ಏನೊ, ಮುದುಕಯ್ಯಾ! ನಿನ್ನ ಕಾರ್ಯವೇನು?

ಯಾದವ—ಬುದ್ಧಿ! ಏನೆಂದು ಹೇಳಿಕೊಳ್ಲಿ? ಹಾರಾವತಿಯೊಳ್ಗೆ ಮುಸಲ್ರು ಬಂದು ತುಂಬಿಕೊಂಡಿದ್ದಾರೆ! ನಮ್ಮೂರಾಗೆ ಕೂಡ ಬಂದಿದ್ರು. ಅಯ್ಯಪ್ಪಾ! ಆವರು ಮಾಡಿದ್ ಕೆಟ್ಕೆಲ್ಸಾ ಏನೆಂದೇಳ್ಲಿ

ನಮ್ಮೊಡಿಯಾ? ಎಲ್ಲಾ ಮರ್ನಿಯಾಗೂ ಸುಗ್ಗಿ, ಆಸ್ತಿ ಸ್ವಾಸ್ತಿ ಎಲ್ಲ ದೋಚ್ಕೊಂಡು ಹೋಯ್ಬಿಟ್ರು! ಇನ್ ನಮ್ಗತಿ ಯೇನಪ್ಪಾ? ದ್ಯಾವ್ರೇ! (ಇಷ್ಟರಲ್ಲಿ ಮುಕುಲನು ಅರ್ಜುನ ತೊಡೆಯಿಂದಿಳಿದು ಕೆಳಗಡೆ ಆಡುತ್ತಿರುವನು.)

ಮೋತಿ—ಎಲಾ! ಅವರು ದೋಚಿಕೊಂಡು ಹೋದಾಗ ನೀವು ನೋಡುತ್ತ ಕುಳಿತುಕೊಂಡಿರೇನು? ತಡಿಯ ಬೇಕಾಗಿತ್ತು.

ಯಾದವ—ಹೆಂಗಾದಾತು ಬುದ್ಧೀ? ಅವರ್ ಬಹು ಮಂದಿ; ನಾವು ಹತ್ತಿಪತ್ತು. ಅವರು ಬರ್ತಾರೆಂತ್ಕೂಡ ನಮ್ಗೊತ್ತಿರ್ಲಿಲ್ಲ.

ವಿನಯ—ಛಿ! ಅವರನ್ನು ಹೊಡೆದು ಹಾಕಲು ನಿಮ್ಮಿಂದ ಆಗಲಿಲ್ಲವಲ್ಲ?

ಬೋಳಾ—(ತನ್ನ ಪುಷ್ಟವಾದ ಅವಯವಗಳನ್ನು ನೋಡಿಕೊಳ್ಳುತ್ತ)—ಏನು ಮಾಡಲಿ? ನನಗೆ ಮೈಯಲ್ಲಿ ಚೆನ್ನಾಗಿರಬೇಕಿತ್ತು! ಅವರನ್ನು ನೋಡಿ ಬಿಡುತಿದ್ದೆ!

ಮೋತಿ—ಎಲಾ! ಅವರು ಹೊಡೆದಾಗ ನೀವೇನು ಮಾಡಿದಿರಿ? ಹೊಡಿಸಿಕೊಂಡಿರೇನು?

ಯಾದವ—ನಾವ್ಕೂಡ ಹೊಡ್ದವಿ ಬುದ್ದಿ! ನಮ್ಮಲ್ಲಿ ಕೂಡ ಎಂಟ್ಹತ್ತು ಮಂದಿ ಅಲ್ಲೆ ಬಿದ್ಬಿಟ್ರು! ನನ್ಮಗಾ ಕೂಡ ಹೋದಾ ಬುದ್ಧಿ! ಅಯ್ಯೋ! ನನ್ಮಗನೇ! (ರೋದಿಸುವನು)

ಬೋಳಾ—ಛಿ! ಕೂಗುತ್ತೀಯಾ? ಎಲ್ಲರೂ ಸಾಯುವಂತಹರೆ ಅಲ್ಲವೇನು?

ಮೋತಿ—ಈಗ ನಿನ್ನ ಹೇಳಿಕೆ ಆಯಿತಷ್ಟೆ? ಇನ್ನು ಹೊರಟು ಹೋಗಬಹುದು. ರಾಣಾಜಿಯವರು ಇಂತಹ ಹಾಳು ಹರಟೆಗಳನ್ನು ಹಚ್ಚಿಕೊಳ್ಳುವ ಹಾಗಿಲ್ಲ, ತಿಳಿಯಿತೆ?

ಯಾದವ—ಬುದ್ಧಿ! ತಾವೇ ನಮ್ಮನ್ ಕೈಬಿಟ್ರೆ ನಮ್ಗಾಪ್ಪಾಡೇನು? ಎಲ್ರನ್ನಾ ಹಿಡಿ ಹಿಡ್ದು ತಲೆ ಬೋಳ್ಸಿ ಬಿಟ್ಟವ್ರೆ ನಮ್ಮೊಡಿಯಾ!

ಬೋಳಾ—ಅದು ಬಹು ಚೆಲುವ ಕೆಲಸ! ನಾಯಿಂದನ ಕಾಸು ನಿಮಗುಳಿಯಿತು!

ಯಾದವ—ನಮ್ಮಪ್ಪಾ! ನನ್ಕುಟುಂಬ್ವೆ ಆಳಿದು ಹೊಯಿತು ದ್ಯಾವ್ರೂ! ಅಯ್ಯಯ್ಯೋ!

ವಿನಯ—ಛಿ! ಸುಮ್ಮನೆ ಗಲಾಟೆ ಮಾಡಬೇಡ, ಕಂಡೆಯಾ? ಕುಟುಂಬ ಅಳಿದು ಹೋದರೆ ಅದರ ಪೋಷಣೆಗಾಗಿ ಹೆಣಗಾಡುವ ಕಾಟ ತಪ್ಪಿದಂತಾಯಿತು!

ಯಾದವ—ಬುದ್ಧೀ! ತಾವು ಹೀಗೆ ಅಪ್ಣೆ ಕೊಡಿಸ್ಬಹುದೆ? ನಮ್ದಿಂಗುಸ್ರೆ ಪಾಡೇನು? ಅಯ್ಯೋ! ಸರ್ನಾಸೆ! ಸನ್ಮಗ್ಳು! ಎಲ್ರೂ ಮುಸ್ಲ್ರು ಕೈಯಾಗೆ ಸಿಕ್ಕೊಂಡಿರುವ್ರರಲ್ಲಾ! ಶಿವ ಶಿವಾ!

ವಿನಯ—ಏನಯ್ಯಾ ಹೀಗೆ ಒದರುತ್ತಿರುವೆ? ಹೆಂಗುಸರು ಮೊಗಲರ ಮನೆಸೇರಿದರೆ ಅದೊಂದು ಅವಮಾನವೇನು? ಹಸ್ತಿನಾವತಿಯಲ್ಲಿ ಮೊಗಲರಲ್ಲವೆ ಈಗಿನ ರಾಜರು? ಹಲವರು ಅರಸರು ತಂತಮ್ಮ ಕನ್ಯೆಯರನ್ನು ಮೊಗಲರಿಗೆ ಅರ್ಪಿಸುತ್ತಾರಂತೆ! ನೀನು ಮಾತ್ರ ಅವರಿಗಿಂತಲೂ ಮೇಲಾದೆಯಲ್ಲವೆ? ನಡೆ ಇಲ್ಲಿಂದ, ಹೊರಟು ಹೋಗು!

ಯಾದವ—ಬುದ್ಧಿ! ದೊಡ್ಡೋವ್ರು ಮಾಡೋದೆಲ್ಲ ಚೆಂದ! ಈ ಮಾತು ನಡೀದಪ್ಪಾ! ನಮ್ಜಾತಿಯೆಲ್ಲ ಕೆಡ್ಸಿ ಬಿಟ್ರಪ್ಪಾ ಕೆಟ್ಟದ್ರು! ಬಾಯಾಗೆ ಮಾಂಸಾ ತುರ್ಕಿದ್ರಯ್ಯಾ ತುರ್ಕ್ರು! ನಮ್ಮಪ್ಪಾ! ನಮ್ಗೇನ್ಗತಿ?

ಬೋಳಾ—ಛಿ! ಜಾತಿಭ್ರಷ್ಟ! ನಿನ್ನಂತಹರನ್ನು ಕಂಡರೆ ಸಚೇಲ ಸ್ನಾನ ಮಾಡಬೇಕಂತೆ! ಹೇಗೆ ಬಂದೆಯೊ ನಮ್ಮ ಸಭೆಗೆ? ನಡೆ ಇಲ್ಲಿಂದ! ಚುನ್ನಾ! ಏನು ನೋಡುತ್ತಿರುವೆ?

(ಚುನಿಲಾಲನೂ ಹೀರಾಲಾಲನೂ ತಳ್ಳಿಕೊಂಡು ಹೋಗುವರು)

ಚುನಿ—ನಡೆ!

ಯಾದವ—ನಮ್ಮಪ್ಪಾ! ದೊರೇ ಹತ್ರ ದೂರು ಹೇಳೋಕೆ ಬಂದ್ರೆ ಈ ಗತಿಯೆ? ರಾಣಾಜೀ! ಬಡವನ್ಮೇಲೆ ಕೊಂಚವಾದ್ರು ಕರುಣೆ ಬಾರ್ದೇ?

ಹೀರಾ—ಮುಚ್ಚು ಬಾಯಿ! (ಹೋಗುವನು.)

ರಾಮ—ರಾಣಾಜಿ! ರಾಜ ಧರ್ಮವು ತಮಗೆ ತಿಳಿಯದ ವಿಷಯವಲ್ಲ. ಈಗ ಇಲ್ಲಿ ಆಚರಿಸಿದುದು ಯಾವ ಧರ್ಮ?

**ಮೋತಿ**—ಇಂತಹರಿಗೆ ಧರ್ಮವಲ್ಲ, ಕರ್ಮ!

**ರಣ**—ರಾಮಸಿಂಗಜಿ! ಇಂತಹ ಅಲ್ಪವಾದ ವಿಷಯಗಳನ್ನು ನಾವು ಹಚ್ಚಿಕೊಂಡರೆ ಮಹತ್ವಾದ ಕಾರ್ಯಗಳನ್ನು ನಡೆಸಲು ಅವ ಕಾಶವೆ ಇರದು.

**ಜೋದ**—ಅಪ್ಪಾಜಿ! ಇಂದಿನ ಕೃತಿಯು ಕೇವಲ ಶೋಚನಿಯವಾದುದೆ ಸರಿ. ಮುಸಲ್ಮಾನರು ಬಂದು ಹಾವಳಿ ಮಾಡಿದರೆ ಅವರನ್ನು ಹೊಡೆದಟ್ಟುವ ಕರ್ತವ್ಯವು ರಾಜರನ್ನು ಸೇರಿರುವುದು. ಅಂತಹ ರಾಜರೆ ಅದಕ್ಕೆ ಕಿವಿಗೊಡದೆ ಹೋದರೆ ಇನ್ನು ಪ್ರಜೆಗಳ ಪಾಡೇನು?

**ವಿನಯ**—ಯುವರಾಜರೆ! ತಮಗಿನ್ನೂ ಲೋಕದ ಅನುಭವ ಸಾಲದು! ಇಂತಹ ಅಲ್ಪ ವಿಚಾರಗಳಿಗೆ ಆಸ್ಪದ ಕೊಟ್ಟರೆ ದಿನಕ್ಕೆ ಹತ್ತೆಂಟು ದೂರುಗಳು ಬರುವುದಕ್ಕೆ ತೊಡಗುವುದು. ಅನಾಚಾರಕ್ಕೆ ಅವಕಾಶಮಾಡಿದಂತಾಗುವುದು!

**ಬೋಳ**—ಸರಿ ಸರಿ. ಆದರೆ ನಾವು ಅಂತಹವುಗಳನ್ನು ಲಕ್ಷ್ಯಕ್ಕೆ ತಾರದೆ ಹೋದರೆ, ಪ್ರಜೆಗಳು ನಮ್ಮೊಡನೆ ದೂರು ಹೇಳುವುದಕ್ಕೆನೆ ಅಂಜಿಕೊಳ್ಳುವರು! ಲೋಕದಲ್ಲಿ ಶಾಂತತೆ ಸ್ಥಿರವಾಗುವುದು!

**ರಾಮ**—ರಾಣಾಜಿ! ಇಂದಿನ ವರ್ತನೆಯು ಕೇವಲ ಶೋಚನೀಯ ವಾದುದು. ಈ ರೀತಿ ತಾವು ವರ್ತಿಸಿದರೆಂದರೆ, ಇನ್ನು ಸ್ವಲ್ಪ ಕಾಲದಲ್ಲಿಯೆ, ದೇಶದಲ್ಲಿ ಎಲ್ಲೆಲ್ಲಿಯೂ ಅತೃಪ್ತಿಯುಂಟಾಗಿ, ಕೊನೆಗೆ ವಿಶಾದಕರವಾಗಿ ಪರಿಣಮಿಸಲೂ ಬಹುದು.

**ಜೋದ**—ಈ ಮೇವಾರದ ಆಸೆಯನ್ನೆ ಬಿಟ್ಟುಬಿಡಬೇಕಾದೀತು!

**ವಿನಯ**—ಸರಿ. ಭಯಪ್ರದರ್ಶನಕ್ಕೆ ನಿಮ್ಮಿಂದ ಮಿಗಿಲು ಯಾರೂ ಇರಲಾರರು. ಮೇವಾರವು ಈಗಲೀಗ ಕೈಯೊಳಗಿಲ್ಲದಿದ್ದ ರಲ್ಲವೆ ಇನ್ನು ಮುಂದಕ್ಕೆ ಅದರ ಆಸೆ ಇರಬೇಕಾದುದು? ನಮ್ಮಂತಹ ಸಾಹಸಿಗಳು ಇರುವಾಗ ಈ ಸಿಸೋದಿಯರೇನಾ ದರೂ ತಲೆಯೆತ್ತುವುದಕ್ಕಿದೆಯೆಂದು ಎಣಿಸಿರುವಿರಾ?

ರಣ—ನಿಜ ನಿಜ! ವಿನಯು ಸೇನ್! ಚೆನ್ನಾಗಿ ಹೇಳಿದೆ! ಈಗ ನೋಡು: ನಮ್ಮ ನಿಸ್ಸಾರವಾದ ಮಾರ್ವಾಡಕ್ಕಿಂತಲೂ ಈ ಮೇವಾರವೆ ತುಂಬ ಮನಸ್ಸಿಗೆ ಹಿಡಿಯುತ್ತಿದೆ. ಎರಡು ರಾಷ್ಟ್ರಗಳಲ್ಲಿಯೂ ನಮ್ಮ ಶಾಸನಕ್ಕೆ ಪ್ರತಿಹೇಳುವಂತಹನು ಯಾವನೂ ಇರನು: ಅಂದ ಮೇಲೆ ನಮಗಿನ್ನಾರ ಭಯ?

(ಅಷ್ಟರಲ್ಲಿ ತಾರೆಯು ತಟ್ಟನೆ ಪ್ರವೇಶಿಸಿ, ತಿರಸ್ಕಾರ ಪೂರಿತವಾದ ದೃಷ್ಟಿಯಿಂದ ಸಿಂಹಾಸನಸ್ಥನಾದ ರಣಮಲ್ಲನನ್ನು ದುರದುರನೆ ನೋಡಿ, ಕೆಳಗಡೆ ಆಡುತಲಿದ್ದ ಮುಕುಲನನ್ನು ಎತ್ತಿಕೊಂಡು, ಸರಸರನೆ ನಡೆದು ಬಿಡುವಳು. ಎಲ್ಲರೂ ಬೆರಗಾಗಿ ಎದ್ದುನಿಂತು ಒಬ್ಬರ ಮುಖವನ್ನೊಬ್ಬರು ನೋಡುತ್ತಿರುವರು.)

ರಣ—ಏನಿದು?

ಬೋಳಾ—ಎಂತಹ ದಿಟ್ಟತನ?

ಮೋತಿ—ಯಾವಳೊ ಶೂರ್ಪನಖಿ!

ವಿನಯು—ಏನು ಸಾಹಸ?

ಜೋದ—ಸ್ತ್ರೀಯರಿಗೆ ಸ್ವಾತಂತ್ರ್ಯವಿದ್ದರೆ ಇದೇ ಪರಿಣಾಮ!

ಜಯು—ರಾಣಾಜಿ! ಏತಕ್ಕಾಗಿ ಹೀಗೆ ಬೆರಗಾದಿರಿ? ಧಾತ್ರಿಯು ಬಂದು ಮಗುವನ್ನೆತ್ತಿಕೊಂಡು ಹೋದಳು. ಇದರಲ್ಲಿ ವಿಶೇಷವೇನಿದೆ?

ರಣ—ಛಿ ಛಿ! ಹಾಗಲ್ಲ. ಹೇಳದೆ ಕೇಳದೆ ನಮ್ಮ ಆಸ್ಥಾನಕ್ಕೆ ಬಂದು, ಈ ರೀತಿ ಮಾಡುವುದೆಂದರೆ ಇದರ ಅರ್ಥವೇನು? ಇಂತಹ ಅತಿಕ್ರಮವನ್ನು ನಿಲ್ಲಿಸಬೇಕು. ಎಲ್ಲಕ್ಕೂ ನಮ್ಮ ಕುಮಾರಿಯೆ ಕಾರಣ!

ರಾಮ—ರಾಣಾಜಿ! ಮೇವಾರಕ್ಕೆ ಅಧಿಪತಿಯು ಆ ಬಾಲಕನು. ಆತನು ನೆಲದ ಮೇಲೆ ನಲಿದಾಡುತ್ತಿರಲು, ತಾವು ಮಾತ್ರ ಆತನ ಸಿಂಹಪೀಠವನ್ನು ಅಲಂಕರಿಸಿರುವುದು ಕೇವಲ ಅಚಾತುರ್ಯವಾಗಲಿಲ್ಲವೆ?

ರಣ—ರಾಮಸಿಂಗಜಿ! ಏನು ಹೇಳುತ್ತಿರುವಿರಿ?

ಬೋಳಾ—ರಣಮಲ್ಲ ರಾಣರಿಗಿಂತಲೂ ಮೋಕಿಯೆ ಮೇಲಾದನೆ?

**ವಿನಯ**—ಹೆಸರಿಲ್ಲದ ಹುಡುಗನಿದಿರಿಗೆ ಹೆಸರುವಾಸಿ ರಾಣರು ತಲೆ ಬಾಗ ಬೇಕೆಂದರೆ?

**ಮೋತಿ**—ಇಂತಹ ಮೂರ್ಖತನ ಮೂಲದಲ್ಲಿಯೆ ಮುರಿಯುವುದು ಮರ್ಯಾದೆ!

**ಜಯ**—ರಾಣಾಜಿ! ಇದಕ್ಕಾಗಿ ತಾವು ಆಗ್ರಹಗೊಳ್ಳಲು ಅವಕಾಶ ವೇನೂ ಇರದು. ಮಗುವನ್ನು ನೋಡಿಕೊಳ್ಳುವುದು ಧಾತ್ರಿಯ ಕರ್ತವ್ಯ. ಈಗ ತಾರೆಯು ತನ್ನ ಕರ್ತವ್ಯವನ್ನು ಮಾಡಿರುತ್ತಾಳೆ. ಅದನ್ನೇತಕ್ಕಾಗಿ ತಾವು ಮನಸ್ಸಿಗೆ ಹಚ್ಚಿ ಕೊಳ್ಳಬೇಕು?

**ರಣ**—ಇಂತಹ ತೊತ್ತುಗಳು ಮನಬಂದಂತೆ ವರ್ತಿಸ ತೊಡಗಿದರೆಂದರೆ, ಮತ್ತೆ ನಮ್ಮ ಬಾಳೇನುಳಿಯಿತು? ಜೋದಾ! ನಡೆ — ಈ ವಿಷಯವನ್ನು ಚೆನ್ನಾಗಿ ವಿಚಾರಿಸಿಕೊಳ್ಳಬೇಕು!

**ಜೋಧಾ**— ಅದೀಗ ಸರಿ!

(ರಣಮಲ್ಲನೂ ಜೋದನೂ ಅಂತಃಪುರಕ್ಕೆ ಹೋಗುವರು.)

# ೧೧. ರಾಜ್ಯಲೋಭ

[ತಾರೆಯು ಹಂಸಿಯೊಡನೆ ವಾದಿಸುತ್ತಿರುವಳು.]

ತಾರಾ—ನೀನು ಮತ್ತೂ ಮತ್ತೂ ಅದನ್ನೆ ಹೇಳುತ್ತಿರುವೆಯಲ್ಲ! ಇಂತಹ ದುರ್ಗತಿಯು ನಿನ್ನ ಕೂಸಿಗೆ ಹೇಳಿಸಿದುದಲ್ಲ! ನನ್ನಿಂದ ನೋಡಿಕೊಂಡು ಇರುವುದಕ್ಕಾಗದು!

ಹಂಸಿ—ಹಾಗಾದರೆ, ನಾನೇನು ಮಾಡಲಿ ಹೇಳು?

ತಾರಾ—ನಿನ್ನ ಅಪ್ಪಾಜಿಯವರೊಡನೆ ವಿಚಾರಿಸ ಬಾರದೆ? ಮೇವಾರಕ್ಕೆ ಒಂದೇ ಅವರೆ ಅಧಿಪತಿಯಾಗಲಿ! ಇಲ್ಲವಾದರೆ ಮೋಕಿಯೆ ಅಧಿಪತಿಯಾಗಲಿ!

ಹಂಸಿ—ಆಗಲಿ. ಗಂಗೂ! ಅಪ್ಪಾಜಿಯವರನ್ನೊಂದು ಸಲ ಈ ಕಡೆ ಬರಹೇಳು.

ಗಂಗಾ—ಅದೊ, ಅವರಾಗಿಯೆ ಬರುತ್ತಿರುವರು. (ರಣಮಲ್ಲನೂ ಜೋದನೂ ಬರುವರು.)

ರಣ—ಏನೆ ಹಂಸಿ? ನಿನ್ನ ದಾಸಿಗಳಿಗೆ ಸ್ವಾತಂತ್ರ್ಯ ತುಂಬ ಹೆಚ್ಚಾಗಿ ಹೋಯಿತು!

ಹಂಸಿ—ಏನಷ್ಟು ಅವರು ನಡೆಸಿದ ಅಂತಹ ದಿಟ್ಟತನ?

ಜೋದ—ದಿಟ್ಟತನವಲ್ಲದೆ ಮತ್ತೇನು? ತುಂಬಿದ ಸಭೆಯೊಳಗೆ ದುಡುಕುವುದೆಂದರೆ ಅರ್ಥವೇನು?

ಹಂಸಿ—ಅದರಿಂದೇನು? ಅವಶ್ಯವಿದ್ದಾಗ ದುಡುಕಲೆ ಬೇಕಾಗುತ್ತಿದೆ.

ರಣ—ತಾರೆ! ನೀನು ಬಲು ಗಡುಸುಗಾರ್ತಿ!

ತಾರಾ—ಅಲ್ಲವೆ ಮತ್ತೆ? ನಾನು ಗಡುಸುಗಾರ್ತಿ! ದಿಟ್ಟೆ!

ಜೋದ—ನೋಡು ನೋಡು! ಎಂತಹ ಸಾಹಸ!

ತಾರಾ—ಯುವರಾಜ! ಸಮಯಕ್ಕೆ ಸರಿಯಾಗಿ ಸಾಹಸ ತೋರುವುದು ಸಹಜವಲ್ಲವೆ?

ಜೋದ—ಸಾಕು ಸಾಕು!—ಅಮ್ಮಯ್ಯಾ! ನೀನು ಕೊಂಚ ಮೆತ್ತ ಗಿರುವುದರಿಂದಲೆ ಇಂತಹ ಅನರ್ಥಗಳು ನಡೆಯುತ್ತಿವೆ.

ತಾರಾ—ಸರಿ ತಾನೆ! ನಮ್ಮ ಮಹಾರಾಣಿಯು ಕೊಂಚ ಸೂಕ್ಷ್ಮ ವಿಚಾರಿಣಿಯಾಗಿರುತಿದ್ದರೆ, ಮೇವಾರಕ್ಕೆ ಇಂತಹ ದುಃಸ್ಥಿತಿಯು ಬರುತ್ತಲೆ ಇರಲಿಲ್ಲ!

ರಣ—ಈಗ ಬಂದಿರುವುದಾದರೂ ಏನದು?

ತಾರಾ—ಅದನ್ನು ಬೇರೆ ಹೇಳಬೇಕೆ? ರಾಣಾಜಿ! ಈಗ ಮೇವಾರವು ಅರಾಜಕವಾಗಿದೆ!

ರಣ—ಇದೊ, ಇನ್ನು ಮುಂದೆ ಇಂತಹ ಮಾತನ್ನಾಡ ಕೂಡದು. ನಡೆ ಇಲ್ಲಿಂದ, ಹೊರಟು ಹೋಗು!

ತಾರಾ—ರಾಣಾಜಿ! ತಮ್ಮಂತಹರ ಮಾತಿಗೆ ಬೆದರಿ ಹೋಗುವ ಹೆಂಗುಸು ನಾನೆಂದು ಭಾವಿಸಿದಿರೇನೊ? ಸರಳೆಯಾದ ರಾಣಿ ಯನ್ನೂ ಬಾಲಕನಾದ ಮುಕುಲನನ್ನೂ ಸುಲಭವಾಗಿ ವಂಚಿಸಿ ಬಿಟ್ಟಿರಲ್ಲವೆ? ಈಗ ನನ್ನನ್ನು ಗದರಿಸುವುದಕ್ಕೆ ಬಂದಿರುವಿರಿ. ನಿಮ್ಮಂತಹರ ಪೌರುಷವು ಸ್ತ್ರೀಯರಲ್ಲೆ ಶೋಭಿಸೀತಲ್ಲದೆ ಪುರುಷರಲ್ಲಿ ಪ್ರಯೋಜನಕ್ಕೆ ಬಾರದು!

ಜೋದ—ಎಷ್ಟಾದರೂ ಅಲಕ್ಷ್ಯವಾಗಿ ಒದುರುತ್ತಿರುವೆ?

ತಾರಾ—ಅಲಕ್ಷ್ಯವರ್ತನೆ ನಿಮ್ಮಲ್ಲಿಯೆ ಇದೆ! ಮೇವಾರಕ್ಕೆ ಅಧಿ ಪತಿಯು ಮುಕುಲನಾಗಿರುತ್ತ, ಆತನ ಸಿಂಹಾಸನವನ್ನು ನೀವು ಆಕ್ರಮಿಸಿದಿರಷ್ಟೆ? ಇದೆಂತಹ ನ್ಯಾಯ?

ರಣ—ಓಹೊ! ತಿಳಿಯಿತು ತಿಳಿಯಿತು! ಇದೊ, ನಿನಗೆ ರಾಜಕಾರ್ಯ ವೊಂದೂ ತಿಳಿಯದು!

ತಾರಾ—ಅದು ನಿಜ. ನಾನು ಬರಿ ಮೊದ್ದು! ತಾವು ತುಂಬ ವಿಚಕ್ಷ ಣರು! ಆದುದರಿಂದಲೆ ಮೇವಾರವನ್ನು ಸುಲಭವಾಗಿ ಕೈಗೆ ಹಾಕಿ ಕೊಳ್ಳುವ ಯೋಚನೆ ಮಾಡಿರುವಿರಿ!

ರಣ—ಹಾಗೆಂದರೇನೆ?

ತಾರಾ—ಹಾಗೆಂದರೆ ಇಷ್ಟ! ಧರ್ಮಶೀಲ ಚಂಡಾಜಿಯನ್ನು, ಇಲ್ಲದ ಕುತಂತ್ರ ನಡೆಸಿ ಹೊರಕ್ಕೆ ಹಾಕಿಸಿದಿರಿ! ಸಕಲ ವಿಧಗಳಲ್ಲಿಯೂ ನಿಮಗಿಂತಲೆಷ್ಟೊ ಅಧಿಕನೂ ಸತ್ಯಸಂಧನೂ ಶೂರನೂ ಆಗಿದ್ದ ರಘುದೇವನ ಪ್ರಾಣವನ್ನು ಹಿಂಡಿಕೊಂಡಿರಿ! ರಾಣಾಜಿ!——

ರಣ—ಸಾಕು ಸಾಕು! ಮುಚ್ಚು ಬಾಯಿ! ಹಂಸೀ! ಇಂತಹ ದಾಸಿಗಳು ಇಲ್ಲಿರಕೂಡದು.

ಹಂಸಿ—ಏನಪ್ಪ! ನನಗೇನೂ ಆಕೆಯಲ್ಲಿ ದೋಷ ಕಾಣಿಸುವುದಿಲ್ಲ!

ರಣ—ಉಂಡ ಮನೆಗೆ ಎರಡೆಣಿಸುವಂತಹಳು!

ಹಂಸಿ—ಅಪ್ಪಾಜಿ! ಸುಮ್ಮನೆ ಆಕೆಯನ್ನು ದೂರಿ ಪ್ರಯೋಜನವಿಲ್ಲ. ಆಸ್ಥಾನಕ್ಕೆ ಹೋಗುವಾಗ ಮದ್ಯಸೇವನೆಯ ಆ ಸುಟ್ಟ ಅಭ್ಯಾಸವನ್ನು ಕೊಂಚ ನಿಲ್ಲಿಸಿಕೊಳ್ಳಬಾರದೆ?

ರಣ—ಓಹೊ! ನನಗೆ ಕೂಡ ಬುದ್ಧಿ ಹೇಳುವುದಕ್ಕೆ ತೊಡಗಿರುವೆ!

ಹಂಸಿ—ಏನು ಮಾಡಲಿ! ತಾವೆ ಅದಕ್ಕೆ ಆಸ್ಪದ ಮಾಡಿಕೊಂಡಿರುವಿರಿ!

ರಣ—ಇರಲಿ ಇರಲಿ. ಆ ಮೇಲೆ ಮತ್ತೇನು?

ಹಂಸಿ—ಅಪ್ಪಾಜಿ! ತಾವು ಅನಾಚಾರ ಮಾಡಬಹುದಂತೆ! ನಾವು ಹೇಳಬಾರದೇನು?

ರಣ—ಆಗಲಿ ಆಗಲಿ! ಆ ಮೇಲೆ?

ಹಂಸಿ—ಆ ಮೇಲೆ—ತಾವು ಸಿಂಹಾಸನವನ್ನೇರಕೂಡದು.

ರಣ—ಸಾಕು ಮಾಡು! ನಿನ್ನಂತಹ ಹೆಂಗುಸಿನಲ್ಲಿ ಸೀತಿಗೇಳಲು ಬಂದಾಗ ಇದೆಲ್ಲವನ್ನೂ ಹೇಳಿದರೆ ಸರಿಬಿದ್ದೀತು.

ಹಂಸಿ—ಹಾಗಲ್ಲ. ತಾವು ಕೋಪಿಸಿಕೊಳ್ಳಬಾರದು. ಸಿಸೋದಿಯರ ಸಿಂಹಾಸನವನ್ನು ಇತರರು ಏರುವುದೆಂದರೇನು? ತಾವು ಕೆಲವು ಕಾಲದಿಂದ ಮೋಕಿಯನ್ನು ತೊಡೆಯ ಮೇಲಿರಿಸಿಕೊಂಡು ಸಿಂಹಾಸನದ ಮೇಲೆ ಕುಳಿತುಕೊಳ್ಳುತಲಿದ್ದಿರಿ. ನಾನು ಅದಕ್ಕೂ ಆಕ್ಷೇಪಣೆ ಹೇಳಲಿಲ್ಲ.

**ಜೋಧ**—ಅಂತಹ ಆಕ್ಷೇಪಣೆ ನಿಕ್ಷೇಪಣೆಯೊಂದೂ ಪ್ರಯೋಜನಕ್ಕೆ ಬರುತ್ತಲೂ ಇರಲಿಲ್ಲ.

**ಹಂಸಿ**—ಅಲ್ಲವೇನೊ ಜೋಧಾ! ನ್ಯಾಯವಾದ ರಾಣನು ನಮ್ಮ ಮೋಕಿಯಾಗಿರುತ್ತ, ಆತನನ್ನು ಕೆಳಗಿಳಿಯ ಬಿಟ್ಟು, ತಾನು ಮಾತ್ರ ಸಿಂಹಾಸನದಲ್ಲಿ ಕುಳಿತಿರುವುದೆಂದರೇನು?

**ರಣ**—ಏನಾಗುತ್ತದೆ ಹಾಗೆ ಕುಳಿತುಕೊಂಡರೆ? ನಿಮ್ಮ ಮೋಕಿಯಷ್ಟು ಯೋಗ್ಯತೆ ಕೂಡ ನಮಗಿಲ್ಲವೇನು?

**ಹಂಸಿ**—ಯೋಗ್ಯತೆಯ ವಿಚಾರವಲ್ಲ. ನಿಮ್ಮ ಜೋಧಪುರಕ್ಕೆ ಯಾವ ನಾದರೊಬ್ಬನು ಬಂದು, ಸಿಂಹಾಸನದ ಮೇಲೆ ಕುಳಿತುಕೊಂಡ ನೆಂದರೆ ತಾವು ಸುಮ್ಮಗಿರುವಿರೇನು?

**ರಣ**—ಅಂತಹ ಸಾಹಸಿಗನಾವನಾದರೂ ಇದ್ದರೆ ಆತನ ಹೆಸರಳಿಸಿ ಬಿಡು ವುದಿಲ್ಲವೇನು?

**ಹಂಸಿ**—ಹಾಗಾದರೆ ಮೋಕಿಯ ಸ್ಥಾನವನ್ನು ತಾವೀಗ ಆಕ್ರಮಿಸಿರುವಿ ರಷ್ಟೆ?

**ರಣ**—ಏನೆ ಹುಚ್ಚು ಹುಚ್ಚು ಮಾತನಾಡುತ್ತಿ?

**ಹಂಸಿ**—ಹುಚ್ಚೇನೂ ಇಲ್ಲ. ನಾನು ತಮ್ಮನ್ನು ಮಾರ್ವಾಡದಿಂದ ಕರೆಸಿದುದು, ತಮ್ಮಿಂದ ನನಗೆ ಕೊಂಚ ಸಹಾಯವಾಗಬೇಕೆಂದ ಲ್ಲದೆ, ನನ್ನ ಮೋಕಿಯ ರಾಜ್ಯವನ್ನೆ ಅಪಹರಿಸ ಬೇಕೆಂದಲ್ಲ!

**ರಣ**—ಇದೊ, ಬಾಯಿಗೆ ಬಂದಂತೆ ಒದರಬೇಡ! ಹೆಂಗುಸರಿಗೆಷ್ಟು ಅಧಿಕಪ್ರಸಂಗ?

**ಹಂಸಿ**—ಅಪ್ಪಾಜಿ! ತಾವು ಈ ಪರಿ ರೇಗಿಕೊಳ್ಳಬಾರದು. ತಮ್ಮ ಈ ತೆರನಾದ ವರ್ತನೆಯಿಂದ ಪ್ರಜೆಗಳಲ್ಲಿ ತುಂಬ ಅಸಂತುಷ್ಟಿ ಯುಂಟಾಗಿರುವುದು. ಎಲ್ಲರೂ ನನ್ನನ್ನು ದೂರುವುದಕ್ಕೆ ತೊಡಗಿದ್ದಾರೆ. ಸಿಸೋದಿಯರ ರಾಜ್ಯವನ್ನು ರಾಠೋರರಿಗೆ ಕೊಟ್ಟೆನೆಂದು ಅಪವಾದ ಬೇರೆ! ಆದುದರಿಂದ ಮೋಕಿಯನ್ನು ಮಾತ್ರ ತಿರಸ್ಕರಿಸಬೇಡಿರಿ!

**ರಣ**—ಅಹುದು ಮತ್ತೆ! ಪುರಸ್ಕರಿಸಬೇಕು!

**ಹಂಪಿ**—ತಾವೆ ಹೀಗೆಂದು ಬಿಟ್ಟರೆ ಮತ್ತೆ ನನ್ನನ್ನು ಕೇಳುವರಾರು? ಅಪ್ಪಾಜೀ! .... .... ....

**ರಣ**—ಸಾಕು ಸಾಕು! ನಿನ್ನ ನೀತಿಗೀತಿಯೊಂದೂ ಬೇಡ. ಹೇಳಿದಂತೆ ಕೇಳಿಕೊಂಡಿರುವುದು ನಿನ್ನ ಕರ್ತವ್ಯ! — ಜೋದಾ! ನಡೆ, ಹೋಗೋಣ!

**ಹಂಪಿ**—(ತಡೆಯುವಳು.)—ಕೊಂಚ ಸಾವಕಾಶ ಮಾಡೋಣಾಗಲಿ. ನನ್ನ ರಾಜ್ಯದಲ್ಲಿ ನನ್ನ ಮಾತು ಕೊಂಚವಾದರೂ ನಡೆಯಬೇಕು!

**ರಣ**—ನಿನ್ನ ರಾಜ್ಯವಂತೆ! ನಿನಗೆಲ್ಲಿಂದ ರಾಜ್ಯ? ನಾವು ಕೊಟ್ಟ ಮೇಲಲ್ಲವೆ?

**ಹಂಪಿ**—ಹಾಗೆಂದರೇನು? ಮದ್ಯಸೇವನೆಯಿಂದ ತೀರ ಬುದ್ಧಿಭ್ರಮಣ ವಾದಂತಿದೆ! ರಾಜ್ಯ ನನ್ನ ಮೋಕಿಯದಲ್ಲವೇನು?

**ರಣ**—ಏನೆ? ಸ್ವೇಚ್ಛೆಯಾಗಿ ಒದರುತ್ತಿಯಾ?—(ನೆಲದ ಮೇಲೆ ಬೀಳುವಂತೆ ತಳ್ಳಿಬಿಡುವನು.)—ಕುಕ್ಕುರಿಸಿಕೊಂಡಿರಲ್ಲಿ! ಇದೊ, ಇನ್ನೆಲ್ಲಾದರೂ ಉಸಿರೆತ್ತಿದೆಯೆಂದರೆ, ರಾಜ್ಯವೂ ಇಲ್ಲ ಮೋಕಿಯೂ ಇಲ್ಲ ಎನ್ನಿಸಿಬಿಡುತ್ತೇನೆ ನೋಡು!—ಜೋದಾ! ನಡೆ, ನಮಗೆ ರಾಜಕಾರ್ಯವಿದೆ! (ಹೋಗುವರು.)

**ಹಂಪಿ**—(ಬಿದ್ದಲ್ಲಿಂದಲೆ ಹೊಟ್ಟೆಹಿಸುಕಿಕೊಂಡು ವ್ಯಥಿಸುತ್ತಿರುವಳು)—ಆಹಾ! ನನ್ನವರು, ನನಗೆ ಬೇಕಾದವರು—ಎಂದು ನಂಬಿಕೊಂಡು, ಅವರ ಕೈಗೆ ನನ್ನ ಕೂಸನ್ನು ಕೊಟ್ಟರೆ, ಅದರ ಪರಿಣಾಮ ಹೀಗಾಗಬೇಕೆ? (ರೋದಿಸುವಳು.)

**ಮುಕುಲ**—(ಪ್ರವೇಶಿಸಿ, ಅಳುತ್ತಿರುವ ತಾಯನ್ನು ಕಂಡು, ಗಲ್ಲ ಹಿಡಿದು)—ಅಮ್ಮಾ! ಅಮ್ಮಾ! ಇಗೊ, ಇಲ್ಲ ನೋಡು. ಇದೇನಮ್ಮ ನೀ ಅಳುತ್ತಿ? ನಾ ಅತ್ತರೆ ನನ್ನ ಮಾತ್ರ ಅಳಬೇಡ ಎನ್ನುತ್ತಿ, ನೀ ಮಾತ್ರ ಅಳಬಹುದೆಂತ ಕಾಣುತ್ತೆ! ನಿಂಗೇನಾಯಿತು ಹೇಳು? ನೀನೀಗ ಅಳುವುದೇಕೆ? ನಿಂಗೇನು ಬೇಕು? ತಿಂಬೋಕೆ ತಿಂಡಿ ಬೇಕೇನು? ಆಡೋಕೆ ಕುದುರೆ ಬೇಕೇನು? ನನ್ನ ಕುದುರೆ

ಬೇಕಾದರೆ ತೆಕೊ! — ಅಮ್ಮಾ ಅಮ್ಮಾ! ಮಾತಾಡು! ಮಾತಾಡೇ! ಒಂದು ಮಾತು! ಒಂದೇ ಒಂದು ಮಾತು! ನಿಂಗೇನಾಯಿತು ಹೇಳು?—ನನ್ನ ಹತ್ತಿರ ಮಾತಾಡುವಲ್ಲಷ್ಟೆ? ಮಾತಾಡುವಲ್ಲಷ್ಟೆ?———

(ತಾರೆಯೊಡನೆ) — ಚಿಕ್ಕವ್ವಾ! ಅಮ್ಮನಿಗೇನಾಗಿದೆ? ಎಷ್ಟು ಕರೆದರೂ ಮಾತಾಡುವಲ್ಲ.

ತಾರಾ—ಮಾತಾಡದೆ ಏನು?

ಮುಕುಲ—ಅಳುತಾಳೆ ಯಾಕೆ ಹೇಳು?

ತಾರಾ—ಎಲ್ಲಿ ಅಳುತಾಳೆ? ಈಗ ನೀನಾಡುವುದಕ್ಕೆ ಹೋಗು, ನೋಡೋಣ. ನಾಳೂ ಆಗನಿಂದ ಕರೆಯುತ್ತಾನೆ.

ಮುಕುಲ—ಅಳಲ್ಲವೊ? ನೋಡು, ಕಣ್ಣಿನಲ್ಲಿ ನೀರು ಬರುತ್ತೆ! ಗುಸು ಗುಸು ಮಾಡುತಾಳೆ!

ತಾರಾ—ಏನೊ? ಮೈಯಲ್ಲಿ ಚೆನ್ನಾಗಿಲ್ಲವೊ ಏನೊ!

ಮುಕುಲ—ಅಮ್ಮ! ಅಮ್ಮ! ನಿಂಗೆ ಹೊಟ್ಟೆ ನೋವಾಗುತ್ತೇನು? ಪಾಪಾ! ಜೋಯಿಸರನ್ನು ಕರೆಸೋಣ. ಓಷ್ತಿ ಕೊಡುತಾರೆ. ನೀನೀ ಓಷ್ತಿ ಕೊಡುತಾರೆ!

ತಾರಾ—ಮೋಕೀ! ನೀನವಳ ತಳ್ಳಿಗೆ ಹೋಗಬೇಡ ಕಂಡೆಯಾ? ಅದೊ, ತಾನ್ಯಾ ಬಂದ. ಆಡುವುದಕ್ಕೆ ಹೋಗು.

ಮುಕುಲ—ಚಿಕ್ಕವ್ವಾ! ಚಿಕ್ಕವ್ವಾ! ಅಮ್ಮನಿಗೆ ತುಂಬ ಹೊಟ್ಟೆ ನೋವು! ಮಾತು ನಾ ಆಡುವಲ್ಲ!

ತಾರಾ—ಇಲ್ಲ ಮಗೂ! ಹೊಟ್ಟೆ ನೋವಿಲ್ಲ. ಏನೊ ಅಜ್ಜಯ್ಯ ಗದರಿಸಿ ದರಂತೆ.

ಮುಕುಲ—ಅಜ್ಜಯ್ಯ ಬರೀ ಕೆಟ್ಟವ. ನಂಗೆ ಯಾವಾಗಲು ಹೊಡೀ ತಾನೆ! ಮಾವಯ್ಯ ಒಳ್ಳೆಯವ. ಕತ್ತೀ ಕೊಡುತಾನೆ! ಕುದುರೇ ಹತ್ತಿಸುತಾನೆ!—ಚಿಕ್ಕವ್ವ! ಚಿಕ್ಕವ್ವ! ಅಜ್ಜಯ್ಯ ಅಮ್ಮನ್ನ ಹೊಡೆದನೇನು?

ತಾರಾ—ಇಲ್ಲಪ್ಪಾ ಇಲ್ಲ! ಗದರಿಸಿದರೆಂದು ಕಾಣುತ್ತಿದೆ.

ಮುಕುಲ—ಇರಲಿರಲೀ! ನಮ್ಮಮ್ಮನ್ನ ಗದರಿಸಿದಾ! ಹಾಹ್ಹಾ! ಚಿಕ್ಕವ್ವಾ! ನನ್ನ ಕಂಚುಕ ಎಲ್ಲಿದೆ? ನನ್ನ ಕತ್ತಿ ಈಚೇ ಕೊಡು!

ತಾರಾ—ಯಾಕಪ್ಪಾ ಇವು?

ಮುಕುಲ—ಯಾಕೆಂದರೆ? ನೋಡು ಮತ್ತೆ! ಅಜ್ಜಯನ್ನ ಚೆನ್ನಾಗಿ ಹೊಡೆದು ಬಿಡುತೇನೆ!

ತಾರಾ—ಆದರೆ ದೊಡ್ಡವರನ್ನು ಹೊಡೆಯಬಾರದಷ್ಟ?

ಮುಕುಲ—ಮತ್ತೆ ನಮ್ಮಮ್ಮನ ತಳ್ಳಿ ಆತಗೇಕೆ? ಅವಳು ದೊಡ್ಡ ವಳಲ್ಲೇನು?

ತಾರಾ—ಅಜ್ಜಯ್ಯ ಅಷ್ಟು ದೊಡ್ಡವರು! ನೀನು ಬರಿಯ ಚಿಕ್ಕವನು! ನಿನ್ನಿಂದ ಹೊಡೆಯುವುದಕ್ಕಾಗದಷ್ಟ?

ಮುಕುಲ—ಏಕಾಗದು ನೋಡೋಣ! ಸಾಳೂ ಇದ್ದಾನೆ; ತಾನ್ಯಾ ಆಡೋಕೆ ಬರೊ ಹೊತ್ತಾಯಿತು; ಗೋಪೀ ಬಂದಾನು! ನಾವೆಲ್ಲರೂ ಸೇರಿ ಚೆನ್ನಾಗಿ ಹೊಡೆದು ಬಿಡುತ್ತೇವೆ! ದಮ್ಮಯ್ಯಾ ದಮ್ಮಯ್ಯಾ ಎಂತ ಹೇಳಬೇಕು! ಇಲ್ಲವಾದರೆ ಬಿಡೋಕಿಲ್ಲ! ಅದೆಲ್ಲ ಇರಲಿ! ನೀನೀಗ ನನ್ನ ಅಂಗೀಕತ್ತಿ ಈಚೇ ಕೊಡು!

ತಾರಾ—ಸರಿ ಸರಿ. ನೀನು ಒಲು ಜಾಣ! ಈಗ ಹೋಗಿ ಅವರೆಲ್ಲ ರನ್ನೂ ಕೂಡಿ ಹಾಕು. ಆ ಮೇಲೆ ನೋಡೋಣವಂತೆ!

ಮುಕುಲ—ಹಾಗಾದರೆ, ನಾನೀಗಲೆ ಬಂದೆ' ಎಲ್ಲ ತೆಗೆದಿಡು!

ತಾರಾ—ಆಗಲಿ.

ಮುಕುಲ—ಹೂಂ ಮತ್ತೆ! ಸಾಳೂ! ತಾನ್ಯಾ! ಗೋಪೀ! (ಸಂಗಾತಿಗಳನ್ನು ಕರೆಯುತ್ತ ಓಡುವನು.)

ತಾರಾ—ರಾಜ್ಞೀ! ಏತಕ್ಕಾಗಿ ಸುಮ್ಮನೆ ಅರಣ್ಯರೋದನ ಮಾಡುತ್ತಿರುವೆ?

ಹಂಸಿ—ಮತ್ತೇನು ಮಾಡಲಿ? ತಾರೆ! ನನ್ನ ದುರದೃಷ್ಟ! ಏನೆಂದು ಹೇಳಲಿ?

ತಾರಾ—ಆಪತ್ಕಾಲದಲ್ಲಿ ಧೈರ್ಯತಂದುಕೊಂಬುದು ವೀರ ಮಾತೆಯರ ಲಕ್ಷಣ. ಮುಂದಿನ ಮಾರ್ಗವನ್ನು ಯೋಚಿಸದೆ ಬರಿದೆ ರೋದಿಸುವುದರಿಂದ ಆಗುವುದಾದರೂ ಏನು?

ಹಂಪಿ—ತಾರೇ! ನನಗೊಂದೂ ತೋಚುವುದಿಲ್ಲ. ಹೇಗಾದರೂ ಮಾಡಿ ನನ್ನ ಕೂಸನ್ನೊಂದು ಸಲ ಒದುಕಿಸಿ ಕೊಡು. ಮತ್ತೆ ಬೇರೇನು ಹೇಳಲಿ?

ತಾರಾ—ಸುಮ್ಮನೆ ಬಾಯಿಂದ ಹೇಳಿದಷ್ಟಕ್ಕೆ ಆಗುತ್ತಿದೆಯೇನು? ಸಮರ್ಥರಾದವರ ನೆರವು ಆವಶ್ಯಕ.

ಹಂಪಿ—ನಿನಗಿಂತಲೂ ಅಧಿಕರಾದವರು ಇನ್ನಾರು ನನಗಿದ್ದಾರೆ? ಅಧಿಕಾರ ಅಪ್ಪಾಜಿಯವರ ಕೈಯಲ್ಲಿ; ಎಲ್ಲರೂ ಅವರ ಆಜ್ಞಾಧಾರಿಗಳು! ಈಗ ನಾನು ಯಾರನ್ನು ನಂಬಲಿ, ಯಾರನ್ನು ನಂಬದಿರಲಿ?- ತಾರೆ! ತಾರೆ! ರಾಠೋರರು ಮಾತಿನಂತೆಯೆ ಕಾರ್ಯವನ್ನು ಸಾಧಿಸುವಂತಹರು. ಅದರಲ್ಲಿಯೂ ಮೋತೀಲಾಲ, ಜೋಳಾನಾಥ ಮುಂತಾದ ಮದ್ಯಪಾಯಿಗಳು ಸೇರಿಕೊಂಡರೆ ಮತ್ತೆ ನಮ್ಮ ನೋಕಿಯ ಆಸೆಯು ಕೊಂಚವೂ ಇರದು!

ತಾರಾ—ಹಾಗಾದರೆ ಮೇವಾರದಲ್ಲೆಲ್ಲ ಕ್ಷಾತ್ರತ್ವವು ಅಳಿದು ಹೋಯಿತೆಂದು ಭಾವಿಸಿರುವೆಯೇನೊ?

ಹಂಪಿ—ನಾನು ಅನಾಥೆ; ನನ್ನನ್ನು ಕೇಳುವವರಾರು?—ಒಂದು ವೇಳೆ ಚಂಡನಿರುತಿದ್ದರೆ!—

ತಾರಾ—ನಾನು ಕೂಡ ಅದೇ ಹೇಳುವುದು. ಚಂಡಾಜಿಯನ್ನು ಕರೆಸಬೇಕು.

ಹಂಪಿ—ನಾನಾಗಿಯೆ ಆತನನ್ನು ಕೈಯಾರೆ ಹೊರಕ್ಕೆ ಅಟ್ಟಿ, ಈಗ ಯಾವ ನಾಲಗೆಯಿಂದ ಬಾಹೇಳಲಿ? ಈ ಸುಟ್ಟ ಮೋರೆಯನ್ನು ಆತನಿಗೆ ಹೇಗೆ ತೋರಿಸಲಿ?

ತಾರಾ—ಸರಿ! ಈಗ ಮಾತ್ರ ಅನ್ಯಾಯವೆಂದು ತಿಳಿಯಿತಲ್ಲವೆ? ನಾನಂದೆ ಹೇಳಲಿಲ್ಲವೆ-ಈ ಮದ್ಯಪಾಯಿಗಳ ಮಾತಿನಲ್ಲಿ ವಿಶ್ವಾಸವಿಡ

ಬೇಡವೆಂತ? ಇರಲಿ ಈಗ ನಿನ್ನ ಕೂಸನ್ನುಳಿಸಬೇಕಾದರೆ ಆತನಿಂದಲ್ಲದೆ ಸಾಗದು.

ಹಂಪಿ—ಆತನನ್ನು ಈ ಪರಿ ಸಂಕಟಕ್ಕೊಳಗು ಮಾಡಿದ ಪಾಪಿಣಿ ನಾನು! ಈಗ ನನಗೆ ಸಹಾಯ ಮಾಡೆಂದರೆ ಆತನಾದರೂ ಹೇಗೆ ತಾನೆ ಮಾಡಿಯಾನು?

ತಾರಾ—ಅದೆಲ್ಲವೂ ಮತ್ತಿನ ಯೋಚನೆ. ಒಂದು ವೇಳೆ ಆತನು ಒಂದರೆ ನಿನಗೇನೂ ಅಸಮಾಧಾನವಿಲ್ಲವಷ್ಟೆ?

ಹಂಪಿ—ರಾಜ್ಯವನ್ನೆ ಆತನಿಟ್ಟುಕೊಳ್ಳಲಿ ಬೇಕಾದರೆ! ನನಗೇನೂ ವ್ಯಸನವಾಗದು. ಹೇಗಾದರೂ ನನ್ನ ಕೂಸೊಂದು ಒದುಕಿ ಕೊಂಡರೆ ಸೈ!

ತಾರಾ—ಜಯಮಲ್ಲರು ನಮ್ಮ ಮೋಕಿಗೆ ಮೇಲನ್ನೆ ಬಯಸುವವರು. ಅದರ ಮರ್ಮವು ನನಗೆ ಗೊತ್ತಿದೆ.

ಹಂಪಿ—ಹಾಗಾದರೆ ಅವರನ್ನು ಈ ಕ್ಷಣವೆ ಕರೆಸೋಣವಂತೆ!

ತಾರಾ—ಛಿ! ಹಾಗಾಗದು! ನಾವು ಮಾಡುವ ಹಂಚಿಕೆಗಳೆಲ್ಲವೂ ಅತ್ಯಂತ ಗೋಪ್ಯವಾಗಿರಬೇಕು. ರಾಕ್ಷೋರರಿಗೆ ಅದರ ಗಂಧ ಕೂಡ ದೊರೆಯಕೂಡದು! ಆದುದರಿಂದ ಸಮಯ ಸಾಧಿಸಿ ಜಯಮಲ್ಲರನ್ನು ಕಾಣಬೇಕು.

ಹಂಪಿ—ಹೇಗೆ ಬೇಕಾದರೂ ಮಾಡು. ಮೋಕಿಯೊಂದು ಸಲ ಸುರ ಕ್ಷಿತನಾದರೆ ತೀರಿತು! ಪ್ರಾಣಸಮಾತೆಯು ಅಷ್ಟೊಂದು ಕರುಣಿಸಲಿ!

— ❖ —

# ೧೨. ದೀಪಾವಳೀ.

[ಹಂಸಾಕುಮಾರನು ಗೋಕುಂಡದಲ್ಲಿರುವ ಲಕ್ಷ್ಮೀಮಂದಿರಕ್ಕೆ, ಪೂಜೆಯ ನೆವದಿಂದ ಬಂದಿರುವನು. ಹಂಸಿಯು ತನ್ನ ಕೆಳದಿಯರೊಂದಿಗೆ ಚಂಡನ ನಿರೀಕ್ಷಣೆಯಲ್ಲಿರುವಳು.]

ಹಂಸಿ—(ಮೊಣಕಾಲೂರಿ, ಕೈಮುಗಿದುಕೊಂಡು ದೇವಿಯನ್ನು ಸ್ತುತಿಸುವಳು.)

|| ಮಲ್ಲಿಕಾಮಾಲಿ ||

ಚಂಡ ದೀಧಿತಿ ಮಂಡಲಾಂತರ ಮಂದಿರೇ ಮುದಿತೇಂದಿರೇ ।
ಕುಂಡಲೀಶ್ವರ ಮಂಡಲೇಶ್ವರ ವಲ್ಲಭೇ ಶ್ರುತಿದುರ್ಲಭೇ ॥
ಕುಂಡಲದ್ಯುತಿ ಮಂಡಿತಾನನ ಭಾಸುರೇ ವಿಜಿತಾಸುರೇ ।
ಚಂಡಿ ನೀ ಪೊರೆ ಖಂಡ ಚಂದ್ರ ವಿಭೂಷಣೆ ಖಲಭೀಷಣೇ ॥

(ನಡಕ್ಕ೦)

ತಾರಾ— ರಾಜ್ಞಿ! ಸುಮ್ಮಗೆ ಕೊರಗುವುದರಿಂದಾಗುವುದೇನು? ಚಂಡಾಜಿಯು ಎಂದೂ ಮಾತಿಗೆ ತಪ್ಪನು! ಹಾಗಿರುತಿದ್ದರೆ ನಮ್ಮನ್ನು ಈ ಗೋಕುಂಡದ ಮಂದಿರಕ್ಕೆ ಬರಬೇಕೆಂದು ನಿರ್ಬಂಧ ಪಡಿಸುತಲಿದ್ದನೆ? ಜಯಮಲ್ಲರಂತೂ ಚಂಡಾಜಿಯು ಇಂದು ಇಲ್ಲಿಗೆ ಬರುವನೆಂದು ಖಂಡಿತವಾಗಿಯೂ ಹೇಳಿರುವರು.

ಹಂಸಿ—ತಾರೆ! ನನ್ನ ಅದೃಷ್ಟವಾದರೂ ಎಷ್ಟು ಒಡಕು! ಈ ಕಷ್ಟಗಳೆಲ್ಲವನ್ನೂ ನೋಡಿಕೊಂಡಿರುವುದಕ್ಕಿಂತ ಚಿತಾರೋಹಣವೆ ಚೆನ್ನಾಗಿತ್ತು.

ಜಂಕಿ—ಏನು ಮಾಡುವುದು ಹೇಳು! ಬರುವಾಗ ಕಷ್ಟಗಳು ಬರಲೆಬೇಕು. ಆದರಿಂದ ಎಂದೂ ಎದೆಗುಂದ ಕೂಡದು.

ಹಂಸಿ—(ಮೋತಿಯ ತಲೆಕಡವುತ್ತ ರೋದಿಸುವಳು.)—ಇಂತಹ ಪವಿತ್ರವಾದ ಸಿಸೋದಿಯಾ ವಂಶದಲ್ಲಿ ಜನಿಸಿ, ಈ ಬಾಲಕನು ಇನ್ನು ಯಾವ ಯಾವ ಕಾಡು ಗುಡ್ಡೆಗಳನ್ನು ಅಲೆಯುವುದಕ್ಕಿದೆಯೊ!

ಕಮಲಾ—ಒಂದು ವೇಳೆ ಹಾಗೆ ಬಂದರೂ ಏನು ಮಾಡುವುದಕ್ಕಾಗು ದೀತು? ವಿಧಿಲಿಪಿಯನ್ನು ಮೀರುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ.

ಮೋತಿ—ಅಮ್ಮಾ, ಅಮ್ಮಾ! ಇದೇನು ನೀವೆಲ್ಲರೂ ಅಳುತೀರಿ? ನಾ ಕಾಡುಗುಡ್ಡೆ ಅಲೆಯೋಕೆ ಹೋಗುವಲ್ಲ ಕಂಡಿಯಾ? ಯಾವಾಗಲು ನಿನ್ನ ಹತ್ತಿರಲೆ ಇರುತೇನಂತೆ.

ಹಂಪಿ—ಆಹಾ! ಸುಪ್ರಸಿದ್ಧ ಕನಕಸೇನರಿಂದ ಸ್ಥಾಪಿತವಾದ ಈ ಚಿತ್ತೂರಿನ ಸಿಂಹಾಸನವು ನನ್ನಂತಹ ಪಾಪಿಣಿಯ ಸಂಸರ್ಗದಿಂದ ಅಳಿದು ಹೋಗುವ ಕಾಲವು ಬಂದಿದೆ. ಬಾಪ್ಪಾ ರಾವಳರಂತಹ ಪ್ರತಾಪಶಾಲಿಗಳೂ ಹಮೀರರಂತಹ ಸಾಹಸಿಗಳೂ ಕೈ ತಪ್ಪಿ ಹೋದ ರಾಜ್ಯವನ್ನು ಪುನಃ ಸಂಪಾದಿಸಿಕೊಂಡರು! ನಾನಾದರೊ ಕೈಗೆ ಬಂದ ರಾಜ್ಯವನ್ನು ಪರರ ವಶಕ್ಕೆ ಕೈಯಾರೆ ಕೊಟ್ಟಂತಹ ಚಾಂಡಾಲಿನಿಯು! ನನ್ನಿಂದಾಗಿ ಸಿಸೋದಿಯರ ಸಂಪತ್ತು ಕೊನೆಗಾಣುವಂತಾಯಿತು! ಹಾಹಾ! ಚಂಡನಾದರೂ ಒಂದು ಸಲ ಬರುತಿದ್ದರೆ!

ಯಾದವ—(ಜನರ ಸಂದಣಿಯಿಂದ ವೃದ್ಧವೇಷದಲ್ಲಿದ್ದವನು ಬಂದು)—ರಾಜ್ಞಿ! ನಿಶ್ಚಿಂತಳಾಗು! ಚಂಡಾಜಿಯು ಬಂದೆ ಬಿಟ್ಟನು.

ಹಂಪಿ—(ಬೆರಗಾಗಿ)—ಯಾದವಾ! ಇದೇನು ವೇಷ?

ಯಾದವ—ಅಹುದು. ಕಾಲಕ್ಕೆ ಸರಿಯಾಗಿ ಕೋಲಕಟ್ಟ ಬೇಕಾಯಿತು. ಇಲ್ಲಿ ನೆರೆದಿರುವವರೆಲ್ಲರೂ ನಿನ್ನ ಸೇವಕರೆ ಆಗಿರುತ್ತಾರೆ. ರಾಠೋರರಿಗೆ ತಿಳಿಯಬಾರದೆಂದು ಎಲ್ಲರೂ ವೇಷಪಲ್ಲಟ ಮಾಡಿಕೊಂಡಿರುತ್ತೇವೆ. ರೂಪಜಿ! ಚಂಡಾಜಿಯನ್ನು ಬರ ಮಾಡೋಣಾಗಲಿ.

ಚಂಡ—(ಪ್ರವೇಶಿಸಿ)—ರಾಜ್ಞಿ! ಚಂಡನು ವಂದಿಸುವನು.

ಹಂಪಿ—ಜಯಶಾಲಿಯಾಗು. ಚಂಡಾಜಿ! ನಾನಪರಾಧಿನಿ!* * * *

**ಚಂಡ**—ಮಾತುಶ್ರೀ! ಅಂತಹ ಮಾತುಗಳಿಗೆ ಈಗ ಅವಕಾಶವಿಲ್ಲ. ರಾಠೋರರನ್ನು ಹೊರಕ್ಕಟ್ಟಿ ಮೊದಲು ಚಿತ್ತೂರನ್ನು ವಶಪಡಿಸಿ ಕೊಳ್ಳಬೇಕು. ಕಾರಣಾಂತರಗಳಿಂದ ಈ ಕಾರ್ಯವನ್ನು ಇಂದೆ ಮಾಡಬೇಕಾಗಿದೆ. ಮಾತಾಜಿ! ಬೆಳಗಾಗ ಬೇಕಾದರೆ ರೂಪಜಿಯು ನಿಮ್ಮೆಲ್ಲರನ್ನೂ ಕರೆದುಕೊಂಡು ಹೋಗುವುದಕ್ಕೆ ಬರುತ್ತಾನೆ ಅದು ತನಕ ನೀವೀ ಮಂದಿರದಲ್ಲಿಯೆ ಇರೋಣಾಗಲಿ. ಹೊರಗೆ ಹತ್ತಿಪ್ಪತ್ತು ಮಂದಿ ಆಹೇರಿಯರನ್ನು ಕಾವಲಿರಿಸುತ್ತೇನೆ. ಮಂದಿರದ ಆವಾರವು ಬಲು ಭದ್ರವಾಗಿದೆ. ಅಂದ ಮೇಲೆ ನಿಮಗೇತರದೂ ಭಯವಿರದು. ಆದರೆ—ಮಾತಾಜಿ! ರಾಠೋರರು ತುಂಬ ಕಪಟಿಗಳು: ಮೋಕಿಯ ಪ್ರಾಣಾಪಹರಣ ಮಾಡಲು ಹಿಂದುಮುಂದು ನೋಡುವವರಲ್ಲ! ಆದುದರಿಂದ ನಮ್ಮಲ್ಲಿ ಯಾವನಾದರೊಬ್ಬನು ಬಾರದೆ ನೀವು ಈ ಮಂದಿರದಿಂದ ಹೊರಕ್ಕೆ ಬರಕೂಡದು. ಇನ್ನು ವಿಳಂಬ ಮಾಡಲಾರೆ. ಯಾದವಾ!

**ಯಾದವ**—ಎಲ್ಲ ವ್ಯವಸ್ಥೆಗಳೂ ಚೆನ್ನಾಗಿವೆ. ಇಷ್ಟು ಹೊತ್ತಿಗೆ ಚೇಲಾಜಿಯು ಚಿತ್ತೂರನ್ನು ಸಮೀಪಿಸಿರ ಬಹುದು.

**ಚಂಡ**—ಜಯಮಲ್ಲರ ಕಡೆಯಿಂದ ಏನಾದರೂ ಸುದ್ದಿ ಬಂದಿರುವುದೆ?

**ಯಾದವ**—ಅಹುದು. ದುರ್ಗದೊಳಗೆ ಇನ್ನೂರು ಮಂದಿ ಆಹೇರಿಯರು ಸಶಸ್ತ್ರರಾಗಿ ಕಾದುಕೊಂಡಿರುವರಂತೆ.

**ಚಂಡ**—ದುರ್ಗರಕ್ಷಣೆಯು ಹೇಗಿರುವುದು? ಯಾವ ದ್ವಾರವು ನಮಗೆ ಅನುಕೂಲ?

**ಯಾದವ**—'ರಾಮಪಾಲ'ವೆ ನಮಗೆ ಅನುಕೂಲವಂತೆ. ಅಲ್ಲಿನ ಕಾವಲಿಗೆ ಇಬ್ಬರು ಮಾತ್ರ ಭಾಟಿಯರು; ಉಳಿದವರೆಲ್ಲರೂ ಆಹೇರಿಯರು.

**ಚಂಡ**—ಇನ್ನೇನಾದರೂ ಸೂಚಿಸಲಿಲ್ಲವೆ?

**ಯಾದವ**—ಬರುದಾದ ಪಾಲಕಿಯನ್ನು ಹೊತ್ತುಕೊಂಡು ಗೋತುಂಡದ ಕಣಿವೆಯ ಮಾರ್ಗವನ್ನು ನಾವು ಅನುಸರಿಸಬೇಕು. ಅದೇ ನಿರ್ದಿಷ್ಟವಾದ ಸ್ಥಳವಂತೆ!

**ಚಂಡ**—ಸರಿ. ಹಾಗಾದರೆ ಹೊರಡೋಣ, ನಡೆಯಿರಿ. ರಾಜ್ಞೀ! ಜಾಗರೂಕತೆಯಿಂದಿರೋಣಾಗಲಿ! (ಅಡಿಗೆರಗುವನು.)

**ಹಂಸಿ**—ಆಗಲಿ. ಯಶೋವಂತನಾಗು. (ಚಂಡನೂ ಅನುಯಾಯಿಗಳೂ ಹೋಗುವರು ಹಂಸಿಯು ದೇವಿಯನ್ನು ಸೆರಗೊಡ್ಡಿ ಬೇಡುವಳು)— ಮಾತೇ! ಅಂಬಾ ಭವಾನೀ! ನನ್ನ ಸರಳ ಸ್ವಭಾವವೆ ಇಂತಹ ದುಷ್ಪರಿಣಾಮವನ್ನು ತಂದೊಡ್ಡಿತು. ಬಾಲನಾದ ಮುಕುಲನು ದುರುಳರಾದ ರಾಠೋರರ ಬಲೆಯೊಳಗೆ ಬಿದ್ದಿರುವನು! ಕಲಂಕರಹಿತವಾಗಿ ಬೆಳಗುತ್ತಲಿದ್ದ ರವಿಕುಲವನ್ನು, ಕಲಂಕಿತರಾದ ರಾಠೋರರು ಅಳಿಸಿ ಬಿಡಬೇಕೆಂದಿರುವರು. ಇಂತಹ ಕಠಿಣ ಪ್ರಸಂಗದಲ್ಲಿ—ಇಂತಹ ಗಂಡಾಂತರದಲ್ಲಿ—ಮಾತೆ! ರುದ್ರಾಣೀ!— ಅಬಲೆಯಾದ ನಾನು, ಸಬಲೆಯಾದ ನಿನ್ನನ್ನಲ್ಲದೆ ಮತ್ತಾರನ್ನು ಮರೆಹೊಗಲಿ? ದೇವೀ! ಪ್ರಾಣಕ್ಕೂ ಪ್ರಿಯತಮವಾದ ನಮ್ಮ ದೇಶವನ್ನೂ ಕೀರ್ತಿಯನ್ನೂ ಪುತ್ರನನ್ನೂ ಕಾದು ಕೊಡುವ ಭಾರವು ನಿನ್ನ ಮೇಲಿದೆ! ನಂಬಿದ ದಾಸಿಗೆ ಇಂಬು ದೊರೆಯಲಿ!

|| ಮಲ್ಲಿಕಾಮಾಲೆ ||

**ಅಂಬುಜಾನನೆ ಕಂಬುಕಂಧರೆ ಕುಂಭಿನೀಧರ ನಂದಿನೀ |**
**ಶಂಬರಾಹಿತ ಶಾಸನಪ್ರಿಯೆ ಶುಂಭದಾನವ ಮರ್ದಿನೀ ||**
**ಶಂಬಪಾಣಿ ವಿಧಾತೃವಿಷ್ಣುಕುಟುಂಬಿನೀ ಪರಿಪಾಲಿನೀ |**
**ತುಂಬುರಾಜಜಗಾನಲೋಲೆ ಮುದಂಬೆ ರಕ್ಷಿಪುದೀಶ್ವರೀ ||**

[ಪಟಕ್ಷ್ಯಂ]



## ೧೩. ಪ್ರೇಮಬಂಧನ.

[ಮದಿರಾ ನಿಮಗ್ನನಾದ ರಣಮಲ್ಲನು ಅಸಿಕ್ನಿಕೆಯಾದ ಗಂಗೆಯೊಡನೆ ಸರಸವಾಡಲು ತೊಡಗಿರುವನು]

ರಣ—ಸುಂದರೀ! ನಾನೀ ಪರಿಯಾಗಿ ಹೇಳಿಕೊಂಡರೂ ನಿನ್ನ ಹೃದಯದಲ್ಲಿ ಲೇಶವಾದರೂ ಕನಿಕರ ಹುಟ್ಟುವುದಿಲ್ಲವೆ? ಸ್ತ್ರೀಯಾಗಿ ಜನಿಸಿ—ಅದರಲ್ಲಿಯೂ ರೂಪ ಯೌವನ ಸಂಪನ್ನೆಯಾಗಿರಲು—ಅನುರೂಪನಾದ ಪುರುಷನನ್ನು ಸೇರದವಳ ಬಾಳುವೆಯು ಕೇವಲ ನಿರರ್ಥಕವೆ ಸರಿ! ಬ್ರಹ್ಮನು ಹಲವು ಬಗೆಯ ಉತ್ತಮ ವಸ್ತುಗಳನ್ನು ನಿರ್ಮಿಸಿರುವನು. ಏತಕ್ಕಾಗಿ ಗೊತ್ತಿದೆಯೇ? ಸೃಷ್ಟಿಯಲ್ಲಿ ಉಚ್ಚಸ್ಥಾನವನ್ನು ಪಡೆದಿರುವ ಮಾನವರ ಉಪಭೋಗಕ್ಕಾಗಿಯಲ್ಲದೆ ಮತ್ತೆ ಬೇರೆಯಲ್ಲ! ಈ ಪ್ರಪಂಚದಲ್ಲಿ ಜನ್ಮವನ್ನೆತ್ತಿದ ಮೇಲೆ ಇಲ್ಲಿರುವ ಸಮಸ್ತ ವೈಭವಗಳನ್ನೂ ಅನುಭವಿಸಲೆ ಬೇಕು. ಇಲ್ಲವಾದರೆ ವಿಧಾತನ ಉದ್ದೇಶವು ಕೊನೆಗಂಡಂತಾಗುವುದಿಲ್ಲ! ಸುಂದರೀ! ನನಗೇನು ಸಂಪದವಿದ್ದರೇನು ಫಲ? ನಿನ್ನಂತಹ ರತ್ನವು ದೊರಕದೆ ಹೋದಲ್ಲಿ ನನ್ನ ಸಂಪತ್ತೆಲ್ಲವೂ ನನಗಿಲ್ಲದಂತೆಯೆ ಸರಿ! ಮನೋಹರೆ! ನನ್ನ ಮಾತನ್ನೆಂದೂ ನಿರಾಕರಿಸ ಬೇಡ; ನನ್ನ ಅರ್ಧಾಂಗಿಯಾಗು; ನಿನಗೊಂದರ ಕೊರತೆಯೂ ಉಂಟಾಗದು!

ಗಂಗಾ—ರಾಣಾಜಿ! ಶಾಸನಕರ್ತೃಗಳಾದ ತಾವೇ ಇಂತಹ ಮಾತುಗಳನ್ನಾಡಿದರೆ ಮತ್ತೇನುಳಿಯಿತು? ಇಂತಹ ಪಾಪಬುದ್ಧಿಯನ್ನು ತ್ಯಜಿಸಿ ಬಿಡಿರಿ.

ರಣ—ಇದರಲ್ಲಿ ಪಾಪವೆಲ್ಲಿಂದ? ನಾನೂ ವಿಪತ್ನೀಕ! ನೀನೂ ಅವಿವಾಹಿತೆ! ಅಂದ ಮೇಲೆ ಆಕ್ಷೇಪಣೆಯೇನು?

ಗಂಗಾ—ತಾವಾದರೊ ರಾಜಾಧಿರಾಜರು! ನಾನು ಕೇವಲ ಭಿಕ್ಷುಕಿ! ಅಂದ ಮೇಲೆ ನಮ್ಮಿಬ್ಬರೊಳಗೆ ಶರೀರ ಸಂಬಂಧವು ಹೇಗೆ ತಾನೆ ಸರಿ ಬಿದ್ದೀತು?

ರಣ—ನೀನಾ ಯೋಚನೆ ಕಟ್ಟಿಕೊಳ್ಳಬೇಡ!

ಗಂಗಾ—ರಾಣಾಜಿ! ಮದ್ಯದ ಮದದಿಂದ ತಾವು ಹೀಗೆನ್ನುತ್ತಿರುವಿರಿ!

ರಣ—ನೀನು ನನ್ನ ಮಾತಿಗೆ ಸಮ್ಮತಿಸು. ಅಂದ ಮೇಲೆ ನೀನೇ ಮೇವಾರಕ್ಕೆ ರಾಣಿಯಾಗುವೆ! ನಿನ್ನ ಮಕ್ಕಳೆ ಮುಂದಕ್ಕೆ ಸಿಂಹಾಸನಾಧಿಪತಿಗಳು!

ಗಂಗಾ—ಏನೆಂದಿರಿ? ಏನದು? ಮೇವಾರಕ್ಕೆ ತಮ್ಮ ಮೊಮ್ಮಗನಲ್ಲವೆ?

ರಣ—ಓಹೊಹೊ! ನಿನಗಿಷ್ಟೆ ಗೊತ್ತು. ಮೋಕಿಯು ಗೋತುಂಡ ದಿಂದ ಹಿಂದೆ ಬರುವ ಹಾಗಿಲ್ಲ ತಿಳಿಯಿತೆ?

ಗಂಗಾ—ಎಂದರೆ? ನನಗೊಂದೂ ಗೊತ್ತಾಗಲಿಲ್ಲ.

ರಣ—ಹಾಗಾದರೆ ಕೇಳು: ಇಂದು ರಾತ್ರೆ ಮೋಕಿಯು ಗೋತುಂಡದಿಂದ ಬರುತ್ತ ಹಾದಿಯಲ್ಲಿ ಆತನನ್ನು ಪ್ರಾಣದಿಂದ ಹೊಡೆದು ಹಾಕು ವಂತೆ ಏರ್ಪಾಡು ಮಾಡಿರುತ್ತದೆ! ಜೋಧಾನಾಥನೆ ಸ್ವಂತವಾಗಿ ಹೋಗಿದ್ದಾನೆ. ಅಂದ ಮೇಲೆ ಮೇವಾರ ಹೇಗೂ ನಮ್ಮದೆ ಆಯಿತಲ್ಲವೆ? ಇನ್ನಾದರೂ ವಿವಾಹಕ್ಕೆ ಆಕ್ಷೇಪಣೆ ಇಲ್ಲವಷ್ಟೆ? ಗಾಂಧರ್ವ ರೀತಿಯು ಶಾಸ್ತ್ರೋಕ್ತವಾಗಿದೆ!--ಏನದು ಯೋಚಿಸು ತ್ತಿರುವೆ? (ಗಂಗೆಯು ಹೋಗಲುದ್ಯುಕ್ತಯಾಗುವಳು) -- ಎಲ್ಲಿಗೆ ಹೊರಟೆ?

ಗಂಗಾ—ಮೋಕಿಯನ್ನು ಉಳಿಸುವುದಕ್ಕೆ!

ರಣ—ಸರಿ ತಾನೆ! ನಿನ್ನಿಂದೇನಾದೀತು? ಇರಲಿ—ಗಂಗೂ! ಇದೊ ಇಲ್ಲಿ ಕೇಳು! ವಿವಾಹಕ್ಕೆ ಸಮ್ಮತಿಸು. ನೀನು ಸದಾ ನನ್ನ ಬಳಿಯಿಲ್ಲದೆ, ನನಗೆ ಸರ್ವವೂ ಅಂಧಕಾರಮಯವಾಗಿ ಭಾಸ ವಾಗುತ್ತಿದೆ! ಮನೋಹರೆ! (ಮುಟ್ಟ ಹೋಗುವನು)

ಗಂಗಾ—ಛಿ! ಧೂರ್ತ! (ದೂರ ಸರಿಯುವಳು) ಪರನಾರಿಯರನ್ನು ಬಯಸಿ ಹಾಳಾದವರ ಅವಸ್ಥೆಯನ್ನಾದರೂ ಸ್ಮರಿಸಿಕೊಳ್ಳ ಬಾರದೆ?

ರಣ—ಮನೋಹರೆ! ಗಂಗೂ! ನಿನ್ನೀ ಛಲವನ್ನು ಬಿಡಲೊಲ್ಲೆಯಾ? ನನಗೆ ನೀನೆ ಸ್ವರ್ಗ!

ಗಂಗಾ—ರಾಣಾಜಿ! ಅನಾದಿಯಲ್ಲಿ ಪರನಾರೀಸಹವಾಸದಿಂದ ಪ್ರತ್ಯಕ್ಷ ಸುರಪತಿಯೇ ಸಹಸ್ರಾಕ್ಷನಾದನು! ದಾನವೇಶ್ವರನಾದ ರಾವಣನು ಜಾನಕೀ ದೇವಿಯ ಹಂಬಲಿಂದ ಅಳಿದು ಹೋದನು! ಯಾಜ್ಞಸೇನಿಯ ಮೇಲಣ ಮೋಹವೆ ಕೀಚಕವಂಶಕ್ಕೆ ಕೇತುವಾಯಿತು! ಇದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಈ ರೀತಿ ಅತ್ಯಾಚಾರಕ್ಕೆ ತೊಡಗ ಬಹುದೆ?

ರಣ—ಶಹಭಾಸ್! ಸುಂದರೀ! ನಿನ್ನೀ ಮಾತುಗಳೆಂಬಿವು ಅಮೃತ ಬಿಂದುಗಳಂತಿರುವವು. ಇದೊ, ನನ್ನ ತೊಡೆಯ ಮೇಲೆ ಕುಳಿತುಕೊಂಡು, ಹೇರಳವಾಗಿ ಸುಧಾರಸವನ್ನು ಸುರಿಸಿ, ನನ್ನ ಮನಸ್ಸಿಗೆ ಶಾಂತಿಯನ್ನುಂಟು ಮಾಡು! (ಕೈಹಿಡಿಯ ಹೋಗುವನು.)

ಗಂಗಾ—(ಸರಿದು) ರಾಣಾಜಿ! ಸಾರಿಸಾರಿ ಹೇಳುತ್ತೇನೆ! ಇಂತಹ ದುರಪೇಕ್ಷೆಯನ್ನು ದೂರಮಾಡಿರಿ!

ರಣ—ಮನೋಹರೆ! ಸೆರಗೊಡ್ಡಿ ಬೇಡುತ್ತೇನೆ! ನನ್ನನ್ನೆಂದಿಗೂ ತೊರೆದು ಬಿಡಬೇಡ! ಒಂದು ತಡವೆ ನಿನ್ನ ಕೃಪಾಕಟಾಕ್ಷವನ್ನು ಬೀರು!

(ಕಾಲಿಗೆರಗುವನು.)

ಗಂಗಾ—ಛಿ! ದುರಾಚಾರಿ! (ಕೆನ್ನೆಗೆ ಹೊಡೆದು ನಡೆದು ಬಿಡುವಳು.)

ರಣ—(ಎದ್ದು ಅತ್ತಿತ್ತ ನೋಡಿ)—ಛಿ! ನಾನಿಂತಹ ವೀರನಾಗಿದ್ದುಕೊಂಡು ಹೆಂಗುಸಿನ ಕೈಯಲ್ಲಿ ಸೋತು ಹೋಗುವುದೆಂದರೇನು?—ಇರಲಿ! ಕೊಂಚ ಅಮೃತಪ್ರಾಶನ ಮಾಡಬೇಕು. ಆ ಮೇಲೆ ನೋಡೋಣವಂತೆ! ಶಹಭಾಸ್! ಆನಂದ! ಆನಂದ! (ಮಂಚದ ಮೇಲೆ ಒರಗಿಕೊಂಡು ನಿದ್ರಿಸುವನು. ಕೊಂಚ ಹೊತ್ತಿನಲ್ಲಿ ದುರ್ಗದೊಳಗೆಲ್ಲ 'ಹರಹರ ಮಹಾದೇವ್' 'ಚಂಡಾಜೀಕೀ ಜಯ' ಎಂಬ ಧ್ವನಿಗಳು ಕೇಳ ಬರುವವು. ಗಂಗೆಯು ರಣಮಲ್ಲನ ಬಳಿಗೆ ಬರುವಳು.)

ಗಂಗಾ—ಶಹಭಾಸ್! ಈ ಧೂರ್ತನು ಇಷ್ಟೆಲ್ಲ ಕಪಟ ಕೃತ್ಯಗಳನ್ನು ನಡೆಯಿಸಿದರೂ ಒಂದೂ ಕೊನೆಗಾಣಲಿಲ್ಲ. ಚಂಡಾಜಿಯು ದುರ್ಗವನ್ನು ಆಕ್ರಮಣ ಮಾಡಿರುವನು. ಅಂದ ಮೇಲೆ ಮೋಕಿಯು ಸುರಕ್ಷಿತನಾದಂತೆಯೆ ಸರಿ.—(ಧ್ವನಿಗಳು ಕೇಳಬರುವವು)

—ಇಷ್ಟು ಗಲಬೆಯಾಗುತ್ತಿದ್ದರೂ ಈ ಮೂರ್ಖನಿಗೆ ಇನ್ನೂ ಅಮಲು ಇಳಿದಿಲ್ಲ. ಈತನ ಅತ್ಯಾಚಾರಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಏನು ಮಾಡಲಿ? ಹೇಗೆ ಮಾಡಿದರಾದೀತು? ಸರಿ! ಈತನ ಅರುವತ್ತು ಮೊಳದ ಉಷ್ಣೀಷವಾದರೂ ಕೆಲಸಕ್ಕೆ ಬೀಳ ಬಾರದೇಕೆ? (ಉಷ್ಣೀಷದಿಂದ ರಾಣನನ್ನು ಮಂಚಕ್ಕೆ ಬಿಗಿಯಾಗಿ ಬಿಗಿಯುವಳು. ಹಸನ್ಮುಖಿಯಾಗಿ—) ಇಂತಹ ವೀರಪುರುಷರಿಗೆ ಇದು ಉಚಿತವಾದ ದಂಡನೆಯೆ ಸರಿ. ಶಹಭಾಸ್! ರಾಣಾಜಿ! ಚಂಡಾಜಿಯು ಬಂದು ನಿನ್ನನ್ನು ಎಬ್ಬಿಸುವಾಗ, ನಿನ್ನ ಮನೋಹರೆ ಗಂಗುವನ್ನು ಸ್ಮರಿಸಿಕೊ!

(ಹೋಗುವಳು. ಅಷ್ಟರಲ್ಲಿ ಚಂಡ ಮೊದಲಾದವರು ಬಂದು ರಾಣನ ಅವದಶೆಯನ್ನು ನೋಡಿ ನಗುತ್ತ ನಿಂತುಕೊಳ್ಳುವರು. ಎಚ್ಚರವಾಗಿ ರಣಮಲ್ಲನು ಕಣ್ಣು ತೆರೆದು ನೋಡುವನು. ಶತ್ರುಗಳು ಬಂದಿರುವರೆಂದು ತಿಳಿದು ಬರುವುದು.)

**ಚಂಡ**—ತಾಳಿ ತಾಳಿ! ನಿರಾಯುಧರನ್ನು ಹೊಡೆಯ ಕೂಡದು!

**ರಣ**—ಛಿ! ವಿಶ್ವಾಸಘಾತುಕಿ! (ಆಯುಧವೇನೂ ದೊರೆಯದಿರಲು, ಹತ್ತಿರವಿದ್ದ ಪಡಿಗವನ್ನು ಹಿಡಿದುಕೊಂಡು ಒಂದು ಹಾರು ಹಾರುವನು. ಮಂಚಸಹಿತವಾಗಿ ಎದ್ದು ನಿಲ್ಲುವನು. ಹಾಸು ಮಂಚಗಳು ಬೆನ್ನಿಗೆ ರಕ್ಷೆಯಂತೆ ಅಂಟಿಕೊಂಡು ನೆಟ್ಟಗೆ ನಿಂತಿರುವವು. ಚಂಡನ ಕಡೆಯವರು ಗೊಳ್ಳೆಂದು ನಗುವರು. ರಣಮಲ್ಲನು ಸಿಟ್ಟಿನಿಂದ ಪಡಿಗವನ್ನು ಬೀಸಿ ಒಬ್ಬಿಬ್ಬರನ್ನು ನೆಲಕ್ಕುರುಳಿಸುವನು.)

**ಚಂಡ**—ಯಾದವಾ! ಪ್ರಾಣಸಹಿತ ಹಿಡಿಯಿರಿ.

(ಕೊನೆಗೆ ಪಡಿಗವು ಕೈ ತಪ್ಪಿದ ಮೇಲೆ ರಣಮಲ್ಲನು ಸುಮ್ಮನೆ ನಿಲ್ಲುವನು. ಚಂಡನ ಕಡೆಯವರು ಆತನನ್ನು ಬಿಡಿಸಿ ಸುರಕ್ಷಿತವಾದ ಸ್ಥಳಕ್ಕೊಯ್ಯುವರು.)

# ೧೪ ಸದಸದ್ವಿವೇಕ.

[ಮುಕುಲನನ್ನು ಸಿಂಹಾಸನದಲ್ಲಿರಿಸಿ ಚಂಡಹಂಸಿಯರು ಎಡಬಲಗಳಲ್ಲಿ ನಿಂತಿರುವರು. ರಣಮಲ್ಲ ರಾಣನೂ ಪ್ರಧಾನರೂ ಉಚಿತಾಸನಗಳಲ್ಲಿ ಕುಳಿತಿರುವರು.]

ಚಂಡ—ಯಾದವಾ! ನಿನ್ನ ಹೇಳಿಕೆಯನ್ನು ಮುಗಿಸಿಬಿಡು.

ಯಾದವ—(ರಣಮಲ್ಲನಿಗೆ)—ರಾಣಾಜಿ! ತಾವೇನೂ ಮಾರ್ವಾಡದಂತಹ ರಾಷ್ಟ್ರಕ್ಕೆ ಅಧಿಪತಿಗಳು. ಅದಲ್ಲದೆ ನಮ್ಮ ರಾಣಿ ಹಂಸಾಬಾಯಿಯ ಪಿತೃಗಳು. ಹೀಗಿರುತ್ತ ತಮ್ಮ ವಿಷಯದಲ್ಲಿ ನಮ್ಮ ವರ್ತನೆ ಹೇಗಿರಬೇಕೊ ಒಂದೂ ತೋಚುವುದಿಲ್ಲ. ತಮ್ಮ ಕೃತ್ಯಗಳಿಂದ ತಾವು ಮೇವಾರಕ್ಕೆ ತೀರ ಶತ್ರುಗಳೆಂದು ಹೇಳಬೇಕಾಗುತ್ತಿದೆ. ರಘುದೇವನ ಮರಣಕ್ಕೆ ತಾವು ಕಳುಹಿಕೊಟ್ಟ ವಿಷಲೇಪಿತ ವಸ್ತ್ರವೆ ಕಾರಣ. ನಿನ್ನಿನ ರಾತ್ರಿ ನಮ್ಮ ಬಾಲರಾಣನ ಪ್ರಾಣಾಪಹರಣ ಮಾಡುವ ಹಂಚಿಕೆಗೂ ತಾವೆ ಮೂಲಪುರುಷರು!

ಹಂಸಿ—ಶ್ರೀಹರೀ! ಪರಮಾತ್ಮಾ!

ಚಂಡ—ಮಾತಾಜಿ! ಕೊಂಚ ಸಮಾಧಾನ ಮಾಡಿಕೊಳ್ಳೋಣಾಗಲಿ; ಜೋಳಾನಾಥನು ಐವತ್ತು ಮಂದಿ ಅಶ್ವಾರೋಹಿಗಳೊಂದಿಗೆ ಗೋತುಂಡದ ಕಣಿವೆಯಲ್ಲಿ ಅವಿತುಕೊಂಡಿದ್ದನು. ನೀವೆಲ್ಲರೂ ಹಿಂದೆ ಬರುವಾಗ ನಿಮ್ಮನ್ನು ಹೊಡೆದು ಹಾಕಬೇಕೆಂಬುದೆ ಆತನ ಉದ್ದೇಶವಾಗಿತ್ತು.

ಯಾದವ—ಈಗ, ನಿನ್ನೆ ರಾತ್ರಿಯ ಹೊಡೆದಾಟದಲ್ಲಿ ತಮ್ಮ ಅನುಯಾಯಿಗಳಾದ ಬೋಳಾನಾಥ, ಮೋತೀಲಾಲ ಮುಂತಾದ ವೀರರು ಪ್ರಾಣವನ್ನು ಕಳೆದು ಕೊಂಡಿರುವರು. ರಾವ್ ಜೋಧಾ, ರಾವ್ ರಾಜಮಾನ—ಇವರು ಹಾರ್ವ ಸಂಕುಳರ ಆಶ್ರಯವನ್ನು ಹೊಂದಿಕೊಂಡಿರುವರು. ತಮ್ಮ ಈ ಎರಡು ವರುಷಗಳ ಆಡಳಿತೆಯಿಂದ, ರಾಜ್ಯದಲ್ಲಿ ಕ್ಷೋಭೆ, ಪ್ರಜೆಗಳಲ್ಲಿ ಅಸಂತುಷ್ಟಿ, ಸಂಪತ್ತಿಯಲ್ಲಿ ಕುಂದುಕ—ಇಷ್ಟಲ್ಲದೆ ಮತ್ತೇನೂ

ಇರದು. ತಮ್ಮ ಕೃತಿಗಳು ರಾಜದ್ರೋಹವೊ ವಿಶ್ವಾಸ ಘಾತುಕವೊ, ಏನೆಂಬುದನ್ನು ತಾವೆ ನಮಗೆ ಸೂಚಿಸಿದರಾಗು ತಿತ್ತು. (ರಣಮಲ್ಲನು ಮಾತಾಡಲೊಲ್ಲನು.)

ಚಂಡ—ಮಾತುಶ್ರೀ! ನಿನ್ನ ಅಪ್ಪಾಜಿಯವರಿಗೇನಾದರೂ ಹೇಳುವು ದಕ್ಕಿದ್ದರೆ ಹೇಳಬಾರದೆ?

ಹಂಸಿ—ನಾನೇನು ಹೇಳಲಿ? ಉಚಿತ ತೋರಿದಂತೆ ಮಾಡು.

ಚಂಡ—ರಾವ್ ರಣಮಲ್ಲ ರಾಠೋರರು, ಸಿಸೋದಿಯಾ ಕುಲತಿಲಕ ರಾಣಾ ಮುಕುಲಜೀಯವರ ಆದೇಶವನ್ನು ಕೇಳೋಣಾಗಲಿ! ರಾವ್ ಜೀಗಳಿಗುಂಟಾದ ಅವಮಾನಕ್ಕೆ ಅವರ ಮದ್ಯಸೇವನೆಯೆ ಕಾರಣ. ಉಪಾಯಾಂತರವೇನೂ ಇಲ್ಲದುದರಿಂದ ನಿನ್ನೆ ಕೊಂಚ ಅತ್ಯಾಚಾರ ನಡೆಸಬೇಕಾಯಿತು. ರಾವ್ ಜೀಗಳು ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ, ಇಷ್ಟ ಬಂದಾಗ ತಮ್ಮ ಮಾರ್ವಾಡಕ್ಕೆ ಹೊರಟು ಹೋಗಲು ಸಿಸೋದಿಯರದೇನೂ ಪ್ರತಿಬಂಧಕವಿರದು! ರಾಜ್ಞೀ! (ಸನ್ನೆ ಮಾಡುವನು. ಇಬ್ಬರೂ ರಣಮಲ್ಲನ ಪಾದಕ್ಕೆರಗುವರು.) — ನಮ್ಮ ಸಕಲ ಅಪರಾಧ ಗಳನ್ನೂ ಕ್ಷಮಿಸೋಣಾಗಲಿ!

ಹಂಸಿ—ಅಪ್ಪಾಜೀ! ಕ್ಷಮಿಸೋಣಾಗಲಿ!

ರಣ—ಛಿ' ಇಂತಹ ಮೂರ್ಖರ ನಡುವೆ ಕ್ಷಣಮಾತ್ರವೂ ನಿಲ್ಲಲಾಗದು! (ಹೋಗುವನು)

ವಿನಯ—(ಬಂಧಿತನಾಗಿರುವವನು) — ರಾಜ್ಞೀ! ನಾನು ನಿರಪರಾಧಿ!

ಯಾದವ—ವಿನಯಸೇನ್! ಛಿ! ನಿನಗೆ ಧಿಕ್ಕಾರವಿರಲಿ! ಜನ್ಮಾರಭ್ಯ ಲಾಖಾರಾಣರ ಉಪ್ಪನ್ನ ಉಂಡು, ಕೊನೆಗೆ ಇಂತಹ ರಾಜ ದ್ರೋಹವನ್ನು ಮಾಡುವುದಕ್ಕೆ ನಿನಗೆ ಹೇಗೆ ಧೈರ್ಯ ಬಂತು? ರಾಜದ್ರೋಹೀ! ಪುಣ್ಯಾತ್ಮರಾದ ಆ ಕನಕ ಸೇನರ ವಂಶಕ್ಕೆ ನಿನ್ನಿಂದ ಕಲಂಕ ಬಂದೊದಗಿತು! ಇದೊ! ನೀನು ನನ್ನ ದೊಡ್ಡಪ್ಪನ ಮಗನೆಂದು ನನಗೇನೂ ಕರುಣೆ ಬಾರದು. ನಡೆ

ಇಲ್ಲಿಂದ! ಸೂರ್ಯಾಸ್ತಮಾನವಾಗ ಬೇಕಾದರೆ ಈ ಚಿತ್ತೂರು ಸಂಸ್ಥಾನವನ್ನು ಬಿಟ್ಟು ಹೊರಗೆಲ್ಲಿಗಾದರೂ ಹೋಗು! ಚುನ್ಯಾ! ತಳ್ಳ್ಯಾಚೆ!

(ಚುನಿಲಾಲನು ಕೈಹಿಡಿಯುವನು. ವಿನಯ ಸೇನನು ಹೊರಟು ಹೋಗುವನು.)

ಹಂಸಿ—ಚಂಡಾ! ನಾನು ಅನ್ಯಾಯವಾಗಿ ನಿನಗೆ ಹಲವು ತೆರನಾದ ಸಂಕಟಗಳೊದಗುವಂತೆ ಮಾಡಿದೆ! ಒಂದನ್ನೂ ಮನಸ್ಸಿಗೆ ಹಚ್ಚಿ ಕೊಳ್ಳದೆ ಮೋಕಿಯನ್ನು ಉದ್ಧರಿಸು! (ಕಣ್ಣೀರಿಡುವಳು.)

ಚಂಡ—ಮಾತುಶ್ರೀ! 'ದೇಶವಾತ್ಸಲ್ಯವಿರದವನ ಬಾಳು ನಿಷ್ಪ್ರಯೋಜನ. ಹೇಗೂ ಇರಲಿ. ಈಗ ಆ ಗತಪುರಾಣಗಳನ್ನು ಕಟ್ಟಿಕೊಂಡು ಏನು ಮಾಡುವುದಕ್ಕಿದೆ? ಸಮಸ್ತ ಕಂಟಕಗಳೂ ಪರಿಹಾರವಾಗಿ, ಸುಖಸಂತೋಷಗಳು ಪ್ರಾಪ್ತವಾದ ಈ ಸಮಯದಲ್ಲಿ, ಭಗ ವಂತನ ಸ್ಮರಣ ಮಾಡದೆ ಒರಿದೆ ಗೋಳಾಡುವುದು ಮೂರ್ಖ ತನವೆ ಸರಿ! ಆದುದರಿಂದ ಅಪಾರಮಹಿಮನಾದ ಶ್ರೀ ಪರ ಮಾತ್ಮನ ಸ್ತೋತ್ರದಿಂದ ನಮ್ಮ ಜನ್ಮಸಾರ್ಥಕ ಮಾಡಿ ಕೊಳ್ಳೋಣ!

|| ಮಾಲಕಂಸ — ಝಂಪೆ ||

ಶ್ರೀಲೋಲ ಗುಣಜಾಲ ಜನಜಾಲ ನತಪಾಲ |
ಭೂಭಾರಹರಕಾಲ ಕರುಣಾಲವಾಲಾ || ಧ್ರು ||
ಸುಜನಾಳಿ ಸುಪ್ರೀತ ಶರಣಾಳಿ ಸಂಪ್ರೀತ |
ಕುಜನಾಳಿ ವೈಪಕ್ಷ ದ್ವಿಜರಾಳಿ ಸಂರಕ್ಷ ||
ಧರ್ಮಾಭಿರತಿದಾನಿ ಧರ್ಮಾಧಿಪತಿ ಮಾನಿ |
ಕರ್ಮಾನುಸಾರಿಗಳ ಸಂಮೋದದಿಂ ಪಾಲಿಸೈ



# کتب خانہ

## جامعہ عثمانیہ

۱۔ اراکین مجلس اعلیٰ، مجلس رفقا، مجلس انتظامی، مجالس شعبہ جات و نصاب پانچ کتابیں ایک ماہ تک اپنے پاس رکھ سکینگے۔

۲۔ اساتذہ جامعہ عثمانیہ و کلیہ جات ملحقہ گزیٹیڈ عہدہ داران جامعہ اور اراکین دار الترجمہ دس کتابیں ایک ماہ تک اپنے پاس رکھ سکینگے۔

۳۔ طیلسانین رجسٹر شدہ دو کتابیں، بی۔ اے اور انٹرمیڈیٹ کے طلبہ تین کتابیں، ایم۔ اے، ایل ایل بی و تحقیقاتی جماعتوں کے طلبہ پانچ کتابیں دو ہفتہ تک اپنے پاس رکھ سکینگے۔

۴۔ مدت مقررہ پر کتابیں واپس نہ ہوں تو طلبہ سے بحساب ایک آنہ یومیہ فی کتاب جرمانہ لیا جائیگا۔

۵۔ بشرط موقع کتابیں کرر جاری کی جا سکینگی مگر اس غرض کے لئے کتب خانہ میں کتاب کا لانا لازم ہے۔

۶۔ کتابیں گم یا خراب ہو جائیں تو مستعیر پر ذمہ داری عائد ہوگی۔

۷۔ کتابوں پر کسی قسم کا نشان سیاہی یا پنسل سے نہ لگایا جائے۔

۸۔ قلمی نسخے اور حوالہ کی